# ನಮ್ಮ ಹಬ್ಬಗಳು

## (ಹೇಗೆ ಮಾಡಬೇಕೋ ತಿಳಿದಿದೆಯಾ?)




<u>ರಚಿತ</u> : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**


*www.thraithashakam.org*





# ನಮ್ಮ ಹಬ್ಬಗಳು

## (ಹೇಗೆ ಮಾಡಬೇಕೊ ಗೊತ್ತಾ)


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 80/–**

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲು (ಗೀಟುರಾಯಿ)



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮಿಣಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ನಮ್ಮ ಹಬ್ಬಗಳು



## (ಹೇಗೆ ಮಾಡಬೇಕೊ ಗೊತ್ತಾ)

ಅನಂತ ವಿಶ್ವದಲ್ಲಿ ಶತಕೋಟಿ ಜೀವರಾಶಿಗಳಿವೆಯೆಂದು ಕೆಲವರೆನ್ನುತ್ತಿರುವಾಗ ಕೇಳಿದ್ದೇವೆ. ಅದು ಏನೊ ಹಳೆಯುಗದಲ್ಲಿನ ಮಾತಾಗಿರಬಹುದು. ಈಗ ಒಂದು ಭಾರತದೇಶದಲ್ಲಿಯೇ 100 ಕೋಟಿಗಿಂತಲೂ ಅಧಿಕ ಜನರೆ ಇದ್ದಾರೆ. ಎಷ್ಟೋ ಜಾತಿಗಳ ಜೀವರಾಶಿಗಳೆಲ್ಲವನ್ನು ಸೇರಿಸಿ ನೂರುಕೋಟಿ ಎಂದಿದ್ದಾರಂದರೆ ಬಹುಶಃ ಆ ಸಂಖ್ಯೆ ಕೃತಯುಗದೊಳ ಗಿನದಾಗಿರಬಹುದು. ಕೃತಯುಗದಲ್ಲಿಯೇ ಸ್ವಲ್ಪ ಸಂಖ್ಯೆಯಲ್ಲಿ ಮನುಷ್ಯರಿರುವ ಕಾಲದಲ್ಲಿಯೆ, ಮನುಷ್ಯರಲ್ಲಿ ಜ್ಞಾನ ಸ್ಥಗಿತಗೊಂಡು ಅಜ್ಞಾನ ಬೆಳೆದುಹೋಗಿದೆ. ಮಾನವನು ತನ್ನ ಅಂತರರ್ಮುಖ ಧ್ಯಾಸವನ್ನು ಬಿಟ್ಟು, ಬಾಹ್ಯ ಧ್ಯಾಸದಲ್ಲಿ ಬಿದ್ದುಹೋಗಿದ್ದಾನೆ. ಕೋಟಿ ವಿದ್ಯೆಗಳು ಕೂಳಿಗೋಸ್ಕರವೇ ಎನ್ನುವಂತೆ ಎಲ್ಲಾ ಕೆಲಸಗಳು ಹೊರಗಿನ ಆಹಾರಕ್ಕೆ ಮಾಡುವುದನ್ನು ಪ್ರಾರಂಭಮಾಡಿದ್ದಾನೆ. ಅಂತಹದರಲ್ಲಿ ತನ್ನ ಕಣ್ಣಿಗೆ ಕಾಣಿಸುವ ಫಲದ ಮೇಲೆ ಧ್ಯಾಸವನ್ನು (ಗಮನ) ಬೆಳೆಸಿಕೊಂಡಿದ್ದಾನೆ. ಕಾಣಿಸದ ಫಲವಾದ ಪಾಪಪುಣ್ಯಗಳ ಮೇಲೆ ಸ್ವಲ್ಪವೂ ಸಹ ಧ್ಯಾಸವನ್ನು ಇಡಲಾರದೆ ಹೋಗಿದ್ದಾನೆ. ಅಂತಹ ಸಮಯದಲ್ಲಿ ಮನುಷ್ಯರಲ್ಲಿ ಆಧ್ಯಾತ್ಮಿಕ ದೃಷ್ಟಿಯನ್ನು ಬೆಳೆಸುವುದಕ್ಕೋಸ್ಕರ ಮತ್ತು ಪಾಪಭೀತಿಯನ್ನು ಬೆಳೆಸುವುದಕ್ಕೋಸ್ಕರ ಆದಿನದ ಜ್ಞಾನಿಗಳು ಎಷ್ಟೋ ವಿಧಗಳಿಂದ ಮನುಷ್ಯರಲ್ಲಿ ಜ್ಞಾನ ಚೈತನ್ಯವನ್ನು ತುಂಬುವುದಕ್ಕೆ ಪ್ರಾರಂಭಿಸಿದ್ದಾರೆ. ಅದರಲ್ಲಿನ ಭಾಗವಾಗಿ ಪ್ರತಿ ಮನುಷ್ಯ ತನ್ನ ಜೀವನದಲ್ಲಿ ಹಿಂತಿರುಗಿ ನೋಡಿಕೊಳ್ಳುವಂತೆ, ತನ್ನ ಗತ ಜೀವನದಲ್ಲಿ ಏನು ಮಾಡಿದ್ದೇನೆ, ಏನು ಸಾಧಿಸಿದ್ದೇನೆಂದು ಲೆಕ್ಕ ಹಾಕಿಕೊಳ್ಳುವಂತೆ ಮಾಡಿದ್ದಾರೆ. ಯಾವ ವಿಷಯವಾದರೂ ಮನುಷ್ಯನಿಗೆ ಚೆನ್ನಾಗಿ ಅರ್ಥ ಆಗಬೇಕೆಂದರೆ ಅದನ್ನು ಇನ್ನೊಂದಕ್ಕೆ ಹೋಲಿಸಿ ತೋರಿಸಿದರೆ ಚೆನ್ನಾಗಿರುತ್ತದೆಂದು ತಿಳಿದ ಹಿರಿಯರು ಗಿಡದಿಂದ ಬರುವ ಫಲಿತ ಅಥವಾ ಫಲವಾದ ಹಣ್ಣನ್ನು ಉದಾಹರಣೆಯಾಗಿ ತೋರಿಸುತ್ತಾ ಒಂದು ಪ್ರಕ್ರಿಯೆಯನ್ನು ಮನುಷ್ಯರ ನಡುವೆ ಇಟ್ಟಿದ್ದಾರೆ. ಗಿಡವು ವರ್ಷದಲ್ಲಿ ಕಾಯಿಗಳು ಬಿಡುವುದು, ಆಕಾಯಿ ಹಣ್ಣಾಗಿ ಬದಲಾಗುವುದು ಎಲ್ಲರಿಗೂ ತಿಳಿದ ವಿಷಯವೆ. ಎಲ್ಲರಿಗೂ ತಿಳಿದ ವಿಷಯಕ್ಕೆ ಸಮಾನವಾಗಿ

ಹೋಲಿಸಿ ತೋರಿಸುವುದರಿಂದ ಎಲ್ಲರಿಗೂ ಚೆನ್ನಾಗಿ ಅರ್ಥವಾಗುತ್ತದೆಂಬ ಉದ್ದೇಶದಿಂದ ಹಿರಿಯರು ಆ ಪ್ರಕ್ರಿಯೆಯನ್ನು **(ಹಣ್ಣು) "ಹಬ್ಬ"** ಎನ್ನುವ ಹೆಸರಿನಿಂದಲೇ ಆಚರಿಸುವಂತೆ ಮಾಡಿದ್ದಾರೆ. ಒಂದುಕಾಲದಲ್ಲಿ ಒಂದೇ ಇಂದೂ ಮತವಾಗಿದ್ದ ಮಾನವಜಾತಿ ಈದಿನ ಅನೇಕ ಮತಗಳಾಗಿ ಸೀಳಿಹೋಗಿದ್ದರೂ ಪೂರ್ವ ಕೃತಯುಗದಲ್ಲಿಯೇ ಹಿರಿಯರು ಇಟ್ಟಿರುವ ಆಚರಣೆ ಇವತ್ತಿಗೂ ಅಚ್ಚಳಿಯದಂತೆ ಇದೆ. ಇಂದಿಗೂ ಜನರ ನಡುವೆ ಆಚರಣೆಯಲ್ಲಿದ್ದರೂ ಅದರ ಮೂಲ ಭಾವಾರ್ಥ ಮಾತ್ರ ಇಲ್ಲದಂತೆ ಹೋಗಿದೆ. ಅರ್ಥವಿಲ್ಲದ ಆಚರಣೆಯಿಂದ ಯಾವ ಪ್ರಯೋಜನವೂ ಇಲ್ಲದ ಹಾಗೆ ಹೋಗಿದೆ. ಇಂದು ಜನರ ನಡುವೆ ವ್ಯರ್ಥವಾಗಿ ಉಳಿದುಹೋದ ಆ ದಿನದ ಹಿರಿಯರ ಪ್ರಕ್ರಿಯೆಯನ್ನು ಅರ್ಥವಾಗುವಂತೆ ವಿವರಿಸಿಕೊಳ್ಳೋಣ.

ಕಾಲ ಪವಿತ್ರವಾದುದು ಮತ್ತು ದೈವಸ್ವರೂಪವಾದುದು. ಒಂದು ಮಾತಿನಲ್ಲಿ **ಕಾಲವೇ ನಾನೆಂದು** ದೇವರು ಸಹ ಗೀತೆಯಲ್ಲಿ ಹೇಳಿದ್ದಾನೆ. ಕಾಲವೆಷ್ಟು ಮಹತ್ವದ್ದಾದರೂ ನಾವು ಮಾತ್ರ ಸಹಜವೆನ್ನುವಂತೆಯೇ ಪರಿಗಣಿಸಿದ್ದೇವೆ. ಅದರ ಬೆಲೆ ಏನೊ ಕಾಣಿಸದಂತಿದೆ. ಯಾರೂ ಕಾಲದ ಮೌಲ್ಯವನ್ನು ಕುರಿತು ಆಲೋಚಿಸುತ್ತಿಲ್ಲ. ಕೆಲವರು ಹಿರಿಯರು ಕಾಲ ಬೆಲೆಯುಳ್ಳದೆಂದು ಗ್ರಹಿಸಿ ಟೈಮ್ ಈಜ್ ಮನಿ (ಕಾಲ ಹಣಕ್ಕೆ ಸಮಾನ) ಎಂದಿದ್ದಾರೆ. ಆ ಮಾತಿಗಿಂತಲೂ ಸಹ ಕಾಲ ಬೆಲೆಯುಳ್ಳದೆಂದು ನಾವೆನ್ನುತ್ತಿದ್ದೇವೆ. ಏಕೆಂದರೆ! ಹೋದ ಹಣವನ್ನು ಮತ್ತೆ ಸಂಪಾದಿಸಬಹುದು. ಆದರೆ ಮುಗಿದುಹೋದ ಕಾಲವನ್ನು ಮತ್ತೆ ಸಂಪಾದಿಸಲಾರರು.

ಪ್ರತಿ ಜೀವರಾಶಿ ಕಾಲವನ್ನು ಅನುಭವಿಸುತ್ತಾ ಇದೆ. ಪ್ರತಿ ಜೀವರಾಶಿ ಶರೀರದಿಂದ ಎಷ್ಟೋ ಒಳ್ಳೆಯ ಕೆಟ್ಟ ಕೆಲಸಗಳಲ್ಲಿ ಕಾಲವನ್ನು ಉಪಯೋಗಿಸುತ್ತಿವೆ. ಚಲಿಸುವ ಕಾಲದಲ್ಲಿ ಒಳ್ಳೆಯ ಕೆಲಸ ನಡೆದರೂ, ಕೆಟ್ಟಕೆಲಸ ನಡೆದರೂ ಮಾಡುವ ಜೀವರಾಶಿಗೆ ಅವುಗಳ ಫಲವೂ, ಅನುಭವವೂ ಲಭಿಸುತ್ತದೆ. ಆದರೆ ಕಾಲಕ್ಕೆ ಒಳ್ಳೆಯ ಕೆಟ್ಟದರೊಂದಿಗೆ ಯಾವ ಸಂಬಂಧವಿಲ್ಲ. ಆದ್ದರಿಂದ ಕಾಲ

ದೈವಸ್ವರೂಪವಾದುದೆನ್ನುವುದರಲ್ಲಿ ಸಂದೇಹವಿಲ್ಲ. ಕಾಲ ಒಬ್ಬ ಮನುಷ್ಯನಿಗೆ, ಒಂದು ಜಾತಿಗೆ, ಒಂದು ದೇಶಕ್ಕೆ ಪರಿಮಿತವಾದುದು ಅಲ್ಲ ಅದು ಸಮಸ್ತ ಜಗತ್ತಿಗೆಲ್ಲಾ ಉಪಯೋಗಿಸಲ್ಪಡುತ್ತಿದೆ. ಉದಾಹರಣೆಗೆ ಭಾರತದಲ್ಲಿರುವ ವ್ಯಕ್ತಿಗೂ, ಅಮೆರಿಕಾದಲ್ಲಿರುವ ವ್ಯಕ್ತಿಗೂ ಕಾಲವೊಂದೇ ವಿಧವಾಗಿ ಇದೆ. ಎಲ್ಲರಿಗೂ ಸಮಾನವಾದ ಕಾಲದಲ್ಲಿ ಅವರವರ ಕೆಲಸಗಳೂ, ಅವರವರ ಅನುಭವಗಳೂ ಬೇರೆಬೇರೆಯಾಗಿರಬಹುದು ಆದರೂ ಕಾಲವೆಲ್ಲರಿಗೂ ಒಂದೇ. ಆದ್ದರಿಂದಲೇ ಕಾಲ ದೈವಸ್ವರೂಪವೆಂದು ಹೇಳಬಹುದು.

ಜನ್ಮದಿಂದ ಪ್ರಾರಂಭವಾದ ಕಾಲ ಮರಣದಿಂದ ಅಂತ್ಯವಾಗುತ್ತಿದೆ. ಜನ್ಮಕ್ಕೂ ಮರಣಕ್ಕೂ ಮಧ್ಯದಲ್ಲಿರುವ ಕಾಲವನ್ನು ಜೀವನ ಅಥವಾ ಜೀವಿತಕಾಲ ಎನ್ನುತ್ತಿದ್ದೇವೆ. ಜೀವನದಲ್ಲಿ ಕೆಲವರು ಒಳ್ಳೆಯದಾಗಿ, ಕೆಲವರು ಕೆಟ್ಟದಾಗಿ ಜೀವನವನ್ನು ಸಾಗಿಸುತ್ತಿದ್ದಾರೆ. ಅನಂತವಾದ ಕಾಲದಲ್ಲಿ ಯಾರು ಎಷ್ಟು ವಿಧಗಳಲ್ಲಿ ಜೀವಿಸಿದರೂ ಕೊನೆಗೆ ಅವರು ಕಾಲಗರ್ಭದಲ್ಲಿ ಬೆರೆತು ಹೋಗುವವರೆ.

ಜೀವನದಲ್ಲಿ ವಿಶೇಷತೆ ಹೊಂದಿದವರನ್ನು ಚಿರಂಜೀವಿಗಳೆಂದು ಕರೆಯುವುದು ನಡೆಯುತ್ತಿದೆ. ಅವರ ಜೀವನಕಾಲ ಸ್ವಲ್ಪವೆ ಆದರೂ ಅವರ ಜೀವನದ ಧ್ಯೆಯವು ಬಹಳ ದೊಡ್ಡದಾಗಿರುತ್ತದೆ. ಅವರು ಎಲ್ಲರಂತೆ ಅಲ್ಲದೆ ಜೀವನದಲ್ಲಿ ವಿಶಿಷ್ಟವಾದುದ್ದನ್ನೆ ಸಾಧಿಸುತ್ತಾರೆ. ಅಂತಹವರನ್ನು ಕಾರಣಜನ್ಮಗಳು, ಚಿರಂಜೀವಿಗಳೆಂದು ಕರೆಯುತ್ತಿದ್ದೇವೆ.

ಈ ಕಾಲದಲ್ಲಿ ಕಾಲವೆಂದರೆ ಏನು? ಎಂದು ಸ್ವಲ್ಪವೂ ಯೋಚಿಸದೆ ವ್ಯರ್ಥವಾಗಿ ಕಾಲ ಕಳೆದು ಹುತ್ತದಲ್ಲಿನ ಗೆದ್ದಲು ಹುಟ್ಟುವುದಿಲ್ಲವಾ! ಸಾಯುವುದಿಲ್ಲವಾ! ಎನ್ನುವಂತೆ ಯಾವುದಕ್ಕೂ ಸಾರ್ಥಕವಿಲ್ಲದ ಜೀವನವನ್ನು ಬಹಳಜನ ಕಳೆಯುತ್ತಿದ್ದಾರೆ. ಕ್ಷಣ ಕ್ಷಣವು ನಮ್ಮ ಶರೀರದಲ್ಲಿ ಬದಲಾವಣೆ ನಡೆಯುತ್ತಿದೆ. ಕ್ಷಣ ಕ್ಷಣ ಬದಲಾವಣೆಯಿಂದಲೇ ಬಾಲ್ಯದಿಂದ ವೃದ್ಧಾಪ್ಯಕ್ಕೆ ಶರೀರವು ಸೇರಿಕೊಳ್ಳುತ್ತಿದೆ. ದಿನದಿನವೂ ಕಾಲ ಕಳೆದಂತೆಲ್ಲಾ ಮೃತ್ಯುವು ಹತ್ತಿರವಾಗುತ್ತಿದೆ. ನಡೆಯುವ ಕಾಲದಲ್ಲಿ ಯಾವುದೊ ಒಂದು ದಿನ ಮೃತ್ಯುವನ್ನು

ಸೇರಬೇಕಾಗಿದ್ದೆ. ಅದರೂ ನಡೆದುಹೋಗುವ ಕಾಲವನ್ನು ದೃಷ್ಠಿಯಲ್ಲಿ ಇಟ್ಟುಕೊಂಡು ಮರಣ ಹತ್ತಿರವಾಗುತ್ತಿದೆ ಅಲ್ಲವೆ! ಎಂದು ಯಾರೂ ತಿಳಿಯುತ್ತಿಲ್ಲ. ನಾವು ತಿಳಿದರೂ, ತಿಳಿಯದಿದ್ದರೂ ಕಾಲ ನಿಲ್ಲುವುದಿಲ್ಲ, ಮೃತ್ಯುವು ಬಾರದೆ ಇರುವುದಿಲ್ಲ.

ಮಾನವನ ದೃಷ್ಠಿಯಲ್ಲಿ ಬೆಲೆ ಇಲ್ಲದ ಕಾಲಕ್ಕೆ ಬೆಲೆ ಕಲ್ಪಿಸಬೇಕೆಂದು, ನಡೆದ ಕಾಲ ಮತ್ತೆ ಬರುವುದಿಲ್ಲವೆಂದು ಅರ್ಥವಾಗುವಂತೆ ಮಾಡಬೇಕೆಂದು, ನಿನ್ನ ಜೀವನ ಸ್ವಲ್ಪ ಕಾಲವೆಯೆಂದು, ಆ ಸ್ವಲ್ಪಕಾಲವೂ ಸಹ ಖರ್ಚಾಗಿ ಹೋಗುತ್ತಿದೆಯೆಂದು ಆಲೋಚಿಸಬೇಕೆಂದು, ನಡೆದುಹೋದ ನಿನ್ನ ಜೀವನದಲ್ಲಿ ಏನು ಸಾಧಿಸಿದ್ದೇನೆಂದು ಯೋಚಿಸಬೇಕು. ಮುಖ್ಯವಾಗಿ ಕಾಲವೆಂದರೆ ಏನೊ ಕಣ್ತೆರಿಸಬೇಕೆಂದು ಹಿರಿಯರು ಮನುಷ್ಯರಿಂದ ಆಚರಿಸುವಂತೆ ಮಾಡಿದ ಪ್ರಕ್ರಿಯೆಯನ್ನೆ **ಹಬ್ಬ** ಎನ್ನುತ್ತಿದ್ದೇವೆ. ಕಾಯಿ ಸ್ವಲ್ಪಕಾಲಕ್ಕೆ ಹಣ್ಣಾಗಿ ಬದಲಾಗುತ್ತದೆ. ಕಾಯಿ ಎನ್ನುವುದು ಹಣ್ಣಾಗಿ ಪರಿವರ್ತನೆ ಹೊಂದುವುದು ನಮಗೆ ಪೂರ್ತಿಯಾಗಿ ತಿಳಿದ ವಿಷಯವೆ. ಬದಲಾವಣೆಬಂದ ಹಣ್ಣಿನಿಂದ ಹುಟ್ಟಿದ ಪದವೆ **"ಹಬ್ಬ"**.

ಸಾಧಾರಣವಾಗಿ ಪ್ರಕೃತಿ ಸಿದ್ಧವಾಗಿ ಪ್ರತಿ ಗಿಡ ವರ್ಷಕ್ಕೊಂದುಬಾರಿ ಹೂವು ಬಿಟ್ಟು ಕಾಯಿಗಳು ಕಾಯುವುದು ಸಹಜ. ಗಿಡದಿಂದ ಕಾಯಿ ಕಾದು ಹಣ್ಣಾಗಿ ಬದಲಾಗುವುದಕ್ಕೆ ಅವಧಿ ವರ್ಷದ ಕಾಲ ಹಿಡಿಸುತ್ತದೆ ಅಲ್ಲವೆ! ಆದ್ದರಿಂದ ಗಿಡವನ್ನು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಗಿಡ ತನ್ನ ತುಂಬಿದ ಜೀವನದಲ್ಲಿ ಒಂದುಬಾರಿ ಕಾಯಿಕಾದು ಫಲವಾಗಿ ಬದಲಾಗುವುದಕ್ಕೆ ಒಂದು ವರ್ಷದ ಕಾಲ ಕಳೆದುಹೋಗುತ್ತದೆ. ಹಾಗೆ ಮಾನವನ ಜೀವನದಲ್ಲಿ ಒಂದು ವರ್ಷದ ಕಾಲ ಕಳೆದಿರುವುದನ್ನು ಹಬ್ಬ ಎನ್ನುತ್ತಿದ್ದಾರೆ. ಕಾಯಿ ಹಣ್ಣಾಗಿ ಬದಲಾದಷ್ಟು ಕಾಲವೆಂದು ಹಬ್ಬವೆಂದು ಹೆಸರಿಟ್ಟಿದ್ದಾರೆ. ಗಿಡದಲ್ಲಿ ಕಾಯಿ ಪಕ್ವಕ್ಕೆ ಬಂದಷ್ಟು ದಿನ ಕಾಲವೆಂದು, ಅದೇ ಮಾನವನ ಜೀವನದಲ್ಲಿ ಪಕ್ವದಿನವೆನ್ನುತ್ತಿದ್ದರು. ಈಗ ಪಕ್ವದಿನ ಎನ್ನುವ ಮಾತನ್ನು ಪರ್ವದಿನ ಎನ್ನುತ್ತಿದ್ದೇವೆ. ಈ ವಿಷಯವನ್ನು ವಿವರವಾಗಿ ತಿಳಿದುಕೊಂಡರೆ ಈ ವಿಧವಾದ ಅರ್ಥ ಇದೆ.

ಗಿಡ ವರ್ಷದ ಅವಧಿಯಲ್ಲಿ ತನ್ನ ಸಾರವಾದ ಒಂದು ಹಣ್ಣನ್ನು ಕೊಟ್ಟು ಪರರಿಗೆ ಉಪಯೋಗಪಟ್ಟಿದೆ. ನೀನು ಇತರರಿಗೆ ಯಾವ ರೀತಿಯಾಗಿ ಉಪಯೊಗಪಟ್ಟಿದ್ದೀಯಾ ಎಂದು ಗುರುತು ಬರುವಹಾಗೆ, ವರ್ಷದ ಕಾಲದಲ್ಲಿ ತಾನು ಸಾಧಿಸಿದ ಫಲಿತವೇನು ಎಂದು ಯೋಚಿಸುವಂತೆ ಒಂದು ದಿನವನ್ನು ಹಬ್ಬ ಎಂಬ ಹೆಸರಿನಿಂದ ಮೀಸಲಿಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಮುಳುಗಿಹೋದ ಮನುಷ್ಯ ಕಾಲವನ್ನು ಸಂಪೂರ್ಣವಾಗಿ ಮರೆತುಹೋಗಿದ್ದಾನೆ. ಆದ್ದರಿಂದ ನಿನ್ನ ಜೀವನದಲ್ಲಿ ಸ್ವಲ್ಪ ಕಾಲ ಕಳೆದುಹೋಗಿದೆ ಎಂದು ಗುರುತು ಬರುವಹಾಗೆ ಹಬ್ಬವನ್ನಿಟ್ಟಿದ್ದಾರೆ. ಉದಾಹರಣೆಗೆ ಯುಗಾದಿ ಹಬ್ಬವನ್ನು ತೆಗೆದುಕೊಳ್ಳೋಣ, ಕಳೆದ ವರ್ಷ ಯುಗಾದಿ ಹಬ್ಬ ಮಾಡಿದ್ದೇವೆ. ಈ ವರ್ಷ ಸಹ ಮಾಡುತ್ತಿದ್ದೇವೆ. ಇದನ್ನೇ ಹೊಸ ವರ್ಷ ಎಂದು ಸಹ ಕರೆಯುತ್ತಿದ್ದೇವೆ. ಪೂರ್ವದಲ್ಲಿ ಹಿರಿಯರು ತಮ್ಮ ಜೀವನದಲ್ಲಿ ಒಂದು ವರ್ಷ ಕಳೆದುಹೋಗಿದೆಯೆಂದು, ಮತ್ತೊಂದು ಹೊಸ ವರ್ಷ ನಡೆದುಹೋಗುತ್ತಿದೆಯೆಂದು, ಕಳೆದ ವರ್ಷದಲ್ಲಿ ನಾನೇನು ಜ್ಞಾನವನ್ನು ಸಾಧಿಸಿದ್ದೇನೆಂದು ಹಿಂತಿರುಗಿ ನೋಡುಕೊಳ್ಳುತ್ತಿದ್ದರಂತೆ. ಆದ್ದರಿಂದ ಆ ಯುಗಾದಿ ದಿನದಂದು ನಿತ್ಯ ಜೀವನ ಕಾರ್ಯಗಳಲ್ಲಿ ಮಗ್ನವಾಗದೆ ಎಲ್ಲಾ ಬಿಟ್ಟು ವಿಶ್ರಾಂತಿ ತೆಗೆದುಕೊಂಡು, ಹಿಂದಿನ ಕಾಲವನ್ನು ಕುರಿತು ಯೋಚಿಸಿ ಈ ವರ್ಷ ಕಾಲದಲ್ಲಿ ನಾನೇನು ಮಾಡಿದ್ದೇನೆಂದು, ದೈವಮಾರ್ಗದಲ್ಲಿ ಏನು ಸಾಧಿಸಿದ್ದೇನೆಂದು, ಈ ಕಾಲದಲ್ಲಿ ಕೆಟ್ಟದಾಗಿ ಪ್ರವರ್ತಿಸಿದ್ದೇನಾ, ಇಲ್ಲವೆ ಒಳ್ಳೆಯದಾಗಿ ಪ್ರವರ್ತಿಸಿದ್ದೇನಾ ಎಂದು ಲೆಕ್ಕಹಾಕಿಕೊಳ್ಳುತ್ತಿದ್ದರು. ಆ ದಿನವೆಲ್ಲವೂ ತನ್ನ ಆಧ್ಯಾತ್ಮಿಕ ಜೀವನವನ್ನು ಕುರಿತು ಯೋಚಿಸುತ್ತಾ ಕಳೆಯುತ್ತಿದ್ದರು. ಉಳಿದ ದಿನಗಳಲ್ಲಿ ಆಹಾರವನ್ನು ಕುರಿತು ಯೋಚಿಸಿದ ಹಾಗೆ ಆ ದಿನ ಯಾವ ತಿಂಡಿ ಬಟ್ಟೆಗಳ ಮೇಲೆ ಧ್ಯಾಸ ಬಾರದಹಾಗೆ, ಹೊರಗಿನ ಜೀವನವೊಂದರ ಆಲೋಚನೆ ಏನೂ ಇಲ್ಲದಂತೆ, ಸ್ವಲ್ಪ ಕಾಲಕ್ಕೆ ಮೊದಲೇ ಎಲ್ಲಾ ಆಹಾರ ಪದಾರ್ಥಗಳು ಎಲ್ಲಾ ದಿನಗಳಿಗಿಂತ ಚೆನ್ನಾಗಿ ಇರುವಹಾಗೆ ಸಮಕೂಡಿಸಿಕೊಳ್ಳುತ್ತಿದ್ದರು. ಆಹಾರದಲ್ಲಾಗಲಿ, ಬಟ್ಟೆಯಲ್ಲಾಗಲಿ ಚಿಂತೆಯಿಲ್ಲದ ಹಾಗೆ ಸಮಕೂಡಿಸಿಕೊಂಡು ಪಕ್ಕದ ಕೆಲಸಗಳೆಲ್ಲವನ್ನು ಬಿಟ್ಟು ನಡೆದುಹೋದ ಕಾಲವನ್ನು ಕುರಿತು

ಯೋಚಿಸುವುದು ಆದಿನ ಕರ್ತವ್ಯವಾಗಿ ಇರುತ್ತಿತ್ತು. ಆ ದಿನ ತನ್ನ ಜೀವನವನ್ನು ಕುರಿತು ಯೋಚಿಸುವುದಾದ್ದರಿಂದ ಜ್ಞಾನ ಸಂಬಂಧವಾದ ದಿನವಾಗಿ ಭಾವಿಸಿಕೊಳ್ಳುತ್ತಿದ್ದರು. ನನ್ನ ಜೀವನ ಇಷ್ಟುಕಾಲ ಈ ರೀತಿಯಾಗಿ ಕಳೆದುಹೋಗಿದೆ, ಮುಂದೆ ನಡೆಯುವ ಹಬ್ಬದ ಕಾಲದವರೆಗೂ ಸಾರಾಂಶವಾದಂತಹ ದೈವಸಂಬಂಧವಾದ ಜ್ಞಾನ ಜೀವನವನ್ನು ಕಳೆಯಬೇಕೆಂದು ಕೋರುತ್ತಾ ಪ್ರಾರ್ಥನಾ ಮಂದಿರಗಳಲ್ಲಿಯೊ, ಮನೆಯಲ್ಲಿಯೊ ದೇವರ ಆರಾಧನೆಗಳನ್ನು ನಡೆಸುತ್ತಿದ್ದರು.

ನಿನ್ನ ಜೀವನ ಸ್ವಲ್ಪ ಕಾಯಿಯಿಂದ ಹಣ್ಣಾಗಿ ಬದಲಾಗಿಹೋಗಿದೆಯೆಂದು, ಅದು ಯಾವಾಗ ಉದುರಿಹೋಗುತ್ತದೊ ಹೇಳಲಾರೆವೆಂದು ಈ ವಿಷಯ ಯೋಚಿಸುವುದರ ಗುರುತಿಗಾಗಿಯೇ ಆದಿನ ಹಿರಿಯರು ಹಬ್ಬವನ್ನು ಇಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಮಗ್ನವಾಗಿರುವ ಮಾನವನಿಗೆ ನಿನ್ನ ಆಯುಸ್ಸು ಸ್ವಲ್ಪ ಕಳೆದುಹೋಗಿದೆಯೆಂದು, ಕಳೆದ ಕಾಲದಲ್ಲಿ ಹುಟ್ಟಿ ಏನು ಸಾಧಿಸಿದ್ದೀಯಾ ಎಂದು ತಿಳಿಸುವುದಕ್ಕೆ ಹಿರಿಯರು ಹಬ್ಬವನಿಟ್ಟಿದ್ದಾರೆ. ಈ ಹಬ್ಬಗಳು ಒಂದು ಮತದಲ್ಲಿ ಅಲ್ಲದೆ ಎಲ್ಲಾ ಮತಗಳಲ್ಲಿ ಇರುವುದು ಗಮನಿಸಬೇಕಾದ ವಿಷಯ. ಒಂದೊಂದು ಮತಕ್ಕೂ ಒಂದೊಂದು ಹಬ್ಬ ನಿರ್ಣಯಿಸಲ್ಪಟ್ಟಿದೆ. ಪೂರ್ವದಲ್ಲಿ ಎಲ್ಲಾ ಮತಗಳ ಹಿರಿಯರು ಒಂದೇ ಭಾವನೆಯಿಂದ ಹಬ್ಬಗಳು ಇಟ್ಟಿದ್ದಾರೊ ಇಲ್ಲವೊ ಹೇಳಲಾರೆವು. ಆದರೆ ಹಬ್ಬ ಎಂದರೆ ಕಾಯಿಯಂತಹ ನಿನ್ನ ಜೀವನ ಸ್ವಲ್ಪ ಪರಿಪಕ್ವತೆಗೆ ಬಂದು ಹಣ್ಣಾಗಿದೆಯೆಂದು ತಿಳಿಸುವುದೆ ಹಬ್ಬ.

ಕಾಯಿ ಎಂದರೆ ಪಕ್ವಕ್ಕೆ ಬಾರದಿರುವುದೆಂದು, ಹಣ್ಣಾಗದೆ ಕಾಯಾಗಿರುವುದೆಂದು ಎಲ್ಲರಿಗೂ ತಿಳಿದಿದೆ. ಕಾಯಿ ಎನ್ನುವುದೇನಾದರೂ ಇದ್ದರೆ ಅದು ತಪ್ಪದೆ ಹಣ್ಣಾಗಿ ಮಾರ್ಪಡಬೇಕಾಗಿದ್ದೆ. ಎಂತಹ ಕಾಯಿ ಆದರೂ ಪಕ್ವಕ್ಕೆ ಬಂದಾಗ ಅದನ್ನು ಹಣ್ಣು ಎನ್ನುತ್ತಿದ್ದೇವೆ. ಕಾಯಿ ಹಣ್ಣಾಗಿ ಬದಲಾಗಬೇಕಾಗಿರುವುದು ಒಂದು ಗಿಡಕ್ಕೆ ಅಷ್ಟೇ ಸೀಮಿತವಲ್ಲ ಅದು ಮನುಷ್ಯನಿಗೂ ಸಹ ಅನ್ವಯಿಸುತ್ತದೆ. ಜೀವನವೆಂಬ ಕಾಯಿಯಿಂದ ಮೋಕ್ಷವೆಂಬ ಹಣ್ಣಾಗಿ ಮನುಷ್ಯ

ಬದಲಾಗಬೇಕಾಗಿದೆ. ಒಬ್ಬ ಜೀವಿ ಮೋಕ್ಷವೆಂಬ ಹಣ್ಣಾಗಿ ಬದಲಾಗದವರೆಗೂ ಜೀವನವೆಂಬ ಕಾಯಾಗಿಯೇ ಇರಬೇಕಾಗಿದ್ದೆ ಎಂದು ತಿಳಿಸುವುದಕ್ಕೆ ಜೀವನದಲ್ಲಿ ಜೀವಿ ನಿವಾಸಿಸುವ ಶರೀರವನ್ನು **"ಕಾಯ"** ಎಂದು ಹಿರಿಯರೆಂದಿದ್ದಾರೆ. ತೆಲುಗು ಭಾಷೆಯಲ್ಲಿ ಪದಕ್ಕೆ ಅಂದವನ್ನು ಸಮಕೂಡಿಸುವುದಕ್ಕೆ ಅನೇಕ ಪದಗಳಿಗೆ ಕೊನೆಯಲ್ಲಿ **"ಮು"**ನನ್ನು ಸೇರಿಸುವುದು ಸಹಜ. ಉದಾಹರಣೆಗೆ **ದೀಪ** ಎಂಬ ಪದಕ್ಕೆ **ಮು** ನನ್ನು ಸೇರಿಸಿ ದೀಪಮು ಎನ್ನುವಹಾಗೆ ಅದೇ ರೀತಿ **ಕಾಯಿ (ಕಾಯ)** ಎಂಬ ಪದಕ್ಕೆ **ಮು** ನನ್ನು ಸೇರಿಸಿ **"ಕಾಯಮು"** ಎಂದಿದ್ದಾರೆ. ಆದ್ದರಿಂದ ಕೆಲವು ಪದಗಳ ಕೊನೆಯ ಅಕ್ಷರಕ್ಕೆ ಅರ್ಥ ಇರುವುದಿಲ್ಲವೆಂದು ತಿಳಿಯಬೇಕು. ದೀಪಕಾಂತಿ ಎಂದಾಗ 'ಮು' ಅನ್ನು ಅರ್ಥ ಇಲ್ಲದಿರುವುದಾಗಿ ಪಕ್ಕಕ್ಕೆ ಇಟ್ಟಿದ್ದೇವಲ್ಲವೆ! ಹಾಗೆಯೇ ಶರೀರ ಬಣ್ಣ ಎಂದಾಗ ಆತನೊಂದರ ಕಾಯ ಚಾಯ ಎನ್ನುತ್ತಿದ್ದೇವೆ ಅಲ್ಲವೆ! ಆಗ ಕಾಯಮು ಚಾಯ ಎನ್ನಲಿಲ್ಲ ಅಲ್ಲವೆ! ಅಂದರೆ ಅಲ್ಲಿ ಕಾಯಿ ಪಕ್ಕದಲ್ಲಿ 'ಮು' ಗೆ ಬೆಲೆ ಇಲ್ಲವೆಂಬ ಮಾತು. ಆದ್ದರಿಂದ ಮಾನವ ಶರೀರವನ್ನು ಕಾಯಮು ಎಂದು ಅಂದರೂ ಅದು ಕಾಯಾಗಿಯೇ ಲೆಕ್ಕಿಸಬೇಕು. ಮಾನವ ದೇಹ ಕಾಯಂತಹದ್ದೆ ಅಂದು ಕೊಂಡಿದ್ದೇವೆ ಅಲ್ಲವೆ! ಆದ್ದರಿಂದಲೇ ಕೆಲವರು ಆತ್ಮವನ್ನು ತಿಳಿದ ಹಿರಿಯರು ಆಧ್ಯಾತ್ಮಿಕ ಪದ್ಧತಿಯಲ್ಲಿ **"ಕಾಯ"** ಎಂಬ ಹುತ್ತದಲ್ಲಿ ಚಂದಮಾಮ ಎಂದು ಒಂದು ತತ್ತ್ವವನ್ನು ಸಹ ಬರೆದಿದ್ದಾರೆ. ಆದ್ದರಿಂದ ನಮ್ಮ ಶರೀರ ಕಾಯಂತಹದ್ದೆ ಅದು **"ಹಣ್ಣಾಗಿ"** ಬದಲಾಗಬೇಕಾಗಿದ್ದೆ. ಆ ವಿಧಾನವನ್ನು ತಿಳಿಸುವ ಹೊರಗಿನ ಪ್ರಕ್ರಿಯೆಯೇ ಈದಿನ ನಮ್ಮ ಮಧ್ಯದಲ್ಲಿರುವ ಹಬ್ಬ ಎಂದು ತಿಳಿಯಬೇಕು.

ಈಗಿನ ಕಾಲದಲ್ಲಿ ಎಲ್ಲಾ ಮತಗಳ ಹಬ್ಬಗಳು ಒಂದೇ ಪದ್ಧತಿ, ಒಂದೇ ಭಾವನೆಯಿಂದ ಇವೆಯೆಂದುಕೊಳ್ಳುತ್ತೇವೆ. ಹಬ್ಬ ಎಂದರೆ ಎಲ್ಲಾ ಮತದವರು ಹೊಸ ಬಟ್ಟೆಗಳು ಧರಿಸುವುದು, ಒಳ್ಳೆಯ ತಿಂಡಿ ತಿನ್ನುವುದು, ಯಾವುದೊ ಒಂದು ದೇವರನ್ನು ಆರಾಧಿಸುವುದು, ಮುಗಿಯುವುದು ರೂಢಿಯಾಗಿದೆ. ಕೆಲವರು ಮಾತ್ರ ತಿಂಡಿಗೋಸ್ಕರವೆ ಹಬ್ಬ ಎನ್ನುವ ಹಾಗೆ

ಎಲ್ಲಾ ದಿನಗಳಿಗಿಂತ ಆ ದಿನ ಹೆಚ್ಚಾಗಿ ತಿಂದು ತೇಗುತ್ತಿದ್ದಾರೆ. ಕೆಲವರು ತೂಗುಯ್ಯಾಲೆಯಲ್ಲಿ ತೂಗುವುದೊ, ಆಟಗಳು ಆಡುವುದರಿಂದ ಸಂತಸಪಡುತ್ತಿದ್ದಾರೆ. ಕೆಲವರು ಕುಡಿದು ಕುಪ್ಪಳಿಸುತ್ತಿದ್ದಾರೆ. ಕೆಲವರು ಬೇರೆ ಚಿಂತೆ ಇಲ್ಲದೆ ದಿನವೆಲ್ಲಾ ಇಸ್ಪೇಟಿನಾಟದಲ್ಲಿಯೇ ಕಾಲ ಕಳೆಯುತ್ತಿದ್ದಾರೆ. ಕೆಲವರೇನೊ ದೇವರನ್ನು ಮುಗಿಯುವುದಕ್ಕೆ ಲೈಸೆನ್ಸ್ ದಿನವೆನ್ನುವಂತೆ ಆ ಒಂದು ದಿನ ಇಷ್ಟವಿದ್ದರೂ ಇಲ್ಲದಿದ್ದರೂ ಮುಗಿದು ಕೈ ಕೊಡುವಿಕೊಳ್ಳುತ್ತಿದ್ದಾರೆ. ಕೆಲ ಜನ ನೌಕರರು ತಮ್ಮ ಉದ್ಯೋಗಕ್ಕೆ ರಜಾ ದಿನವಾಗಿ ಇರುತ್ತದೆಂದು, ಹಬ್ಬವೆಂದರೆ ಡ್ಯೂಟಿ (ಕೆಲಸ) ಇಲ್ಲದ ದಿನವೆಂದು ಸಂತೋಷಿಸುತ್ತಿದ್ದಾರೆ. ಕೆಲ ವ್ಯಾಪಾರಿಗಳು ಕಳೆದ ವರ್ಷ ಎಷ್ಟು ಪಾಪ, ಎಷ್ಟು ಪುಣ್ಯ ಸಂಪಾದಿಸಿದ್ದೇ ವೆಂದು ಲೆಕ್ಕಿಸದೆ, ಹಣ ಎಷ್ಟು ಸಂಪಾದಿಸಿದ್ದೇವೆಂದು ಲಾಭ ನಷ್ಟಗಳ ಲೆಕ್ಕಗಳಲ್ಲಿಯೇ ಮಗ್ನರಾಗಿರುತ್ತಾರೆ.

ಪೂರ್ವದಲ್ಲಿ ಹಿರಿಯರು ಇಟ್ಟಿರುವ ಭಾವಾರ್ಥವೆಲ್ಲವೂ ಮಣ್ಣುಪಾಲಾ ಗಿದ್ದು, ಹಬ್ಬವೆಂದರೆ ಏನೊ ಮೂಲ ಅರ್ಥವೆ ತಿಳಿಯದೆಹೋಗಿದೆ. ಪೂರ್ವದಲ್ಲಿ ವರ್ಷಕ್ಕೊಂದು ಹಬ್ಬ ಇರುತ್ತಿತ್ತು. ನಂತರ ಸ್ವಲ್ಪ ಕಾಲಕ್ಕೆ ಮನುಷ್ಯ ಜ್ಞಾನಿಯಾಗಿ ಬದಲಾಗಬೇಕೆಂದರೆ ಮತ್ತೆಕೆಲವು ಹಬ್ಬಗಳು ಅಗತ್ಯವೆಂದು ನಿರ್ಣಯಿಸಿದ ಹಿರಿಯರು ಕೆಲವು ಮುಖ್ಯವಾದ ಹಬ್ಬಗಳನ್ನು ಇಟ್ಟಿದ್ದಾರೆ. ಹಿರಿಯರು ಭಾವಾರ್ಥದಿಂದ ಕೂಡಿದ ಹಬ್ಬಗಳನ್ನು ಇಟ್ಟಿದ್ದರೆ ಅವುಗಳ ಮೂಲಾರ್ಥದಿಂದ ಆಚರಿಸದ ಪ್ರಜೆಗಳು ಹಿರಿಯರು ಹೇಳದವುಗಳನ್ನು ಸಹ ಹಬ್ಬಗಳಾಗಿ ಆಚರಿಸುತ್ತಿದ್ದಾರೆ. ಹೀಗಾಗಿಯೇ ಇಂದು ವರ್ಷಕ್ಕೆ ಲೆಕ್ಕವಿಲ್ಲದಷ್ಟು ಹಬ್ಬಗಳು ತಲೆಯೆತ್ತಿವೆ. ಪೂರ್ವದಲ್ಲಿ ಒಬ್ಬನೆ ದೇವರೆಂಬ ಭಾವವಿರುತ್ತಿತ್ತು. ಈಗ ಅನೇಕಜನ ದೇವರುಗಳಾಗಿದ್ದಾರೆ, ಅನೇಕ ಹಬ್ಬಗಳಾಗಿವೆ. ಮಾನವನ ಜೀವನಕ್ಕೆ ಅವನ ಭಾವ ಪರಿಮಾಣವೇ ಹಬ್ಬವೆಂದು ಸ್ವಲ್ಪವೂ ಯೋಚಿಸದ ಸ್ಥಿತಿಯಲ್ಲಿ ನಾವು ಎಷ್ಟೋ ಹಬ್ಬಗಳು ಮಾಡಿದ್ದೇವೆ, ಇನ್ನೂ ಎಷ್ಟೋ ಹಬ್ಬಗಳು ಹೊಸದಾಗಿ ಬರಲಿವೆ. ಇನ್ನಾದರೂ ಯಾವ ರೀತಿಯಾಗಿ ಹಬ್ಬಗಳನ್ನು ಆಚರಣೆ

ಮಾಡಬೇಕೆಂದುಕೊಂಡಿದ್ದೀರೊ! ನೀವೇ ಚೆನ್ನಾಗಿ ಯೋಚಿಸಿಕೊಂಡು ಹಬ್ಬಗಳು ಮಾಡಿರಿ.

# ಯುಗಾದಿ

ಕಣ್ಣಿಗೆ ಕಾಣಿಸುವ ಈ ಜಗತ್ತೆಲ್ಲವೂ ಒಂದು ದಿನ ಪ್ರಾರಂಭವಾಗಿ ಆದಿನದಿಂದ ಮುಂದುವರಿಯುತ್ತಲೇ ಇದೆ. ಪ್ರಪಂಚದಲ್ಲಿನ ಜೀವರಾಶಿಗಳಿಗೆಲ್ಲ ಸಾವು ಹುಟ್ಟುಗಳು ಇವೆ. ಆದ್ದರಿಂದಲೇ ಈ ಜೀವರಾಶಿಗಳನ್ನೆಲ್ಲವನ್ನು ಜಗತಿ ಎನ್ನುತ್ತಿದ್ದಾರೆ. **'ಜ'** ಎಂದರೆ ಹುಟ್ಟುವುದೆಂದು **'ಗತಿ'** ಎಂದರೆ ಸಾಯುವುದೆಂದು ಅರ್ಥ ಇದೆ. ಜಗತಿ ಎನ್ನುವ ಶಾಶ್ವತ ನಾಮವನ್ನು ಹೊಂದಿದ ಈ ಜೀವ ಸಮುದಾಯ ಯಾವುದೋ ಒಂದು ದಿನ ಹುಟ್ಟಿ, ಯಾವುದೋ ಒಂದು ದಿನ ಇಲ್ಲದಂತೆ ಹೋಗುವುದೆಂದು ಎಲ್ಲರೂ ತಿಳಿದುಕೊಳ್ಳಬೇಕು. ಒಬ್ಬ ಮನುಷ್ಯ ಹುಟ್ಟಿ ಸ್ವಲ್ಪಕಾಲವಿದ್ದು ಮರಣಿಸುವುದು ಎಲ್ಲರಿಗೂ ತಿಳಿದ ಸತ್ಯವೆ. ಆತನು ಇರುವ ಸ್ವಲ್ಪ ಕಾಲವನ್ನು ಆತನ ಆಯುಸ್ಸು ಎನ್ನುತ್ತಿದ್ದೇವೆ. ಮನುಷ್ಯನ ಆಯುಸ್ಸಿಗೆ ಕಾಲಮಾನವಾಗಿ ನಿಮಿಷಗಳು ಮೊದಲುಗೊಂಡು ವರ್ಷಗಳ ವರೆಗೂ ಇವೆ. ಹಾಗೆ ಹುಟ್ಟಿ ಸ್ವಲ್ಪ ಕಾಲವಿದ್ದು ಹೋಗುವ ಈ ಪ್ರಪಂಚಕ್ಕೂ ಸಹ ಆಯುಸ್ಸು ಇದೆ. ಅದರ ಕಾಲಮಾನವು ಯುಗಗಳ ಲೆಕ್ಕದಲ್ಲಿರುತ್ತದೆ. ಮನುಷ್ಯ ಹುಟ್ಟಿದ ದಿನವನ್ನು ಜನ್ಮದಿನವೆಂದು, ಜಾತಕವೆಂದು ಹೇಳುತ್ತಿರುತ್ತಾರೆ. ಹಾಗೆ ಪ್ರಪಂಚ ಹುಟ್ಟಿದ ದಿನವನ್ನು **'ಯುಗ ಆದಿ'** ಎನ್ನುತ್ತಿದ್ದರು. ಅದನ್ನೆ ಸ್ವಲ್ಪಕಾಲಕ್ಕೆ **'ಯುಗಾದಿ'** ಎನ್ನುತ್ತಿದ್ದರು. ಕಾಲ ಕ್ರಮೇಣ ಯುಗಾದಿ ಸಹ ಹೋಗಿ **'ಉಗಾದಿ'** ಯಾಗಿದೆ. ಮುಂಬರುವ ಕಾಲಕ್ಕೆ ಇನ್ನೂ ಯಾವ ಹೆಸರಾಗಿ ಬದಲಾಗಿಹೋಗುತ್ತದೊ ತಿಳಿಯದು.

ಈಗಿನ ಕಾಲದಲ್ಲಿ ಕೆಲವರು ತಮ್ಮ ಹುಟ್ಟಿದದಿನವನ್ನು ಪ್ರತಿ ವರ್ಷದಲ್ಲಿ ಸಡಗರದಿಂದ ಹಬ್ಬ ಮಾಡಿಕೊಳ್ಳುತ್ತಿರುತ್ತಾರೆ. ಸಿಹಿ ತಿಂಡಿಗಳು ಹಂಚಿ ತನ್ನ ಹುಟ್ಟಿದ ದಿನವೆಂದು ತಿಳಿಸುತ್ತಿದ್ದಾರೆ. ಜನ್ಮದಿನ ಆಚರಣೆಗಳು ಪ್ರಸ್ತುತ ಕಾಲದಲ್ಲಿ

ಪ್ರಬಲಗೊಂಡಿವೆ. ಆದರೆ ಪೂರ್ವದಲ್ಲಿ ಯಾರೂ ತಮ್ಮ ಜನ್ಮದಿನದ ಉತ್ಸವಗಳನ್ನು ಮಾಡಿಕೊಂಡಂತೆ ಚರಿತ್ರೆಯಲ್ಲಿ ಇಲ್ಲ. ಶ್ರೀಕೃಷ್ಣಾಷ್ಟಮಿ, ಶ್ರೀರಾಮನವಮಿ ಅವರು ಬದುಕಿರುವಾಗ ಅವರು ಹುಟ್ಟುಹಬ್ಬಗಳನ್ನು ಮಾಡಿಕೊಂಡಂತೆ ಯಾವ ಆಧಾರಗಳು ಇಲ್ಲ. ಪೂರ್ವಕಾಲದಲ್ಲಿ ವೈಯಕ್ತಿಕವಾಗಿ ಹುಟ್ಟಿದ ದಿನಗಳು ಯಾರು ಮಡಿಕೊಳ್ಳದೆ, ಸಾಮೂಹಿಕವಾಗಿ ಪ್ರಪಂಚವೊಂದರ ಹುಟ್ಟಿದ ದಿನವನ್ನು ಹಬ್ಬವಾಗಿ ಮಾಡಿಕೊಳ್ಳುತ್ತಿದ್ದರು. ಆ ದಿನಕ್ಕೆ **'ಯುಗ ಆದಿ'** ಎಂದು ಹೆಸರು ಇಟ್ಟು ಎಲ್ಲದಕ್ಕಿಂತ ಹೆಚ್ಚಾಗಿ, ಅದಕ್ಕಿಂತ ಮಿಗಿಲಾದ ಹಬ್ಬವೇ ಇಲ್ಲವೆನ್ನುವಹಾಗೆ ಮಾಡಿಕೊಳ್ಳುತ್ತಿದ್ದರು. ಕಾಲ ಕ್ರಮೇಣ ಈಗ ಬಹಳ ಹಬ್ಬಗಳು ತಯಾರಾಗಿ ಎಲ್ಲಾ ಹಬ್ಬಗಳಾಗಿಯೇ ಯುಗಾದಿಯೂ ಸಹ ಸಾಮಾನ್ಯ ಹಬ್ಬವಾಗಿದೆ. ಹೀಗೆ ಇನ್ನೂ ಸ್ವಲ್ಪಕಾಲ ಕಳೆದುಹೋದರೆ ಈ ಹಬ್ಬ ಇಲ್ಲದಂತೆಹೋಗುವ ಸ್ಥಿತಿ ಏರ್ಪಡುತ್ತದೇನೊ! ಈಗಾಗಲೇ ಸ್ವಲ್ಪ ಹೆಸರು ಬದಲಾಗಿದೆ, ಸ್ವಲ್ಪ ಆಚರಣೆ ಬದಲಾಗಿದೆ. ವಿದೇಶಿ ಸಾಂಪ್ರದಾಯವಾದ ಜನವರಿ ಮೊದಲನೆ ದಿನಾಂಕ ಹೊಸ ವರ್ಷವಾಗಿದೆ. ಮುಂಬರುವಂತಹ ಕಾಲದಲ್ಲಿ ಹಿಂದೂ ಸಮಾಜದಲ್ಲಿ ಯುಗಾದಿ ಇರುತ್ತದೊ ಇಲ್ಲವೊ ಹೇಳಲಾರೆವು.

ಇಂದೂಗಳು ಹಿಂದೂಗಳಾಗಿ ಬದಲಾಗಿ ಅವರ ಮೂಲ ಸಂಸ್ಕೃತಿಯನ್ನೆ ಮರೆತುಹೋದರೂ, ಆದಿಯಲ್ಲಿ ಹುಟ್ಟಿದ ಇಂದೂಗಳ ಜಾತಿ ಮತ್ತೆ ಯಾವ ಇತರೆ ಮತಗಳಾಗಿ ಬದಲಾಗಿಹೋದರೂ, ಇಂದೂ ಸಂಸ್ಕೃತಿಯನ್ನು ಮಾನವರು ಬಿಟ್ಟರೂ, ಆ ಸಂಸ್ಕೃತಿ ಮನುಷ್ಯರನ್ನು ಬಿಡಲಿಲ್ಲವೆಂದು ಹೇಳುವುದಕ್ಕೆ ಕೆಲವು ತಾರ್ಕಾಣೆಗಳು ಉಳಿದಿವೆ. ಅವುಗಳಲ್ಲಿ ಮುಖ್ಯವಾದ ಒಂದನ್ನು ವಿವರಿಸಿಕೊಳ್ಳೋಣ.

ಪ್ರಸ್ಥುತ ಕಾಲದಲ್ಲಿ ಭೂಮಂಡಲದಲ್ಲಿ ಎಷ್ಟೋ ದೇಶಗಳು ಇವೆ. ಹಾಗೆ ಎಷ್ಟೋ ಮತಗಳೂ, ಎಷ್ಟೋ ಸಂಸ್ಕೃತಿಗಳೂ, ಎಷ್ಟೋ ಭಾಷೆಗಳೂ, ಎಷ್ಟೋ ಸಂಪ್ರದಾಯಗಳು ಇವೆ. ಭೂಮಿ ಮೇಲೆ ಮಾನವರೆಲ್ಲರೂ ಎಷ್ಟು ವಿಭಿನ್ನವಾಗಿ ಇದ್ದರೂ, ಎಲ್ಲರಿಗೂ ಹಗಲು ರಾತ್ರಿ ಒಂದೇ. ಅಷ್ಟೇ ಅಲ್ಲದೆ

ವಾರಕ್ಕೆ ಏಳು ದಿನಗಳು, ತಿಂಗಳಿಗೆ ಮೂವತ್ತು ದಿನಗಳು, ವರ್ಷಕ್ಕೆ ಹನ್ನೆರಡು ತಿಂಗಳು ಸರ್ವಸಾಧಾರಣವಾಗಿ ಇದ್ದೆ ಇವೆ. ಇನ್ನೂ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಪ್ರಪಂಚಕ್ಕೆಲ್ಲಾ ವಾರದಲ್ಲಿನ ಹೆಸರುಗಳು ಒಂದಾಗಿಯೆ ಇವೆ. ಯಾವ ದೇಶದವನಿಗಾದರೂ, ಯಾವ ಮತದವನಿಗಾದರೂ ವಾರದಲ್ಲಿನ ದಿನಗಳ ಹೆಸರುಗಳು ಆದಿ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿವಾರಗಳೇ ಆಗಿರುವುದು ವಿಶೇಷ. ಪ್ರಪಂಚದಲ್ಲಿ ಮೊಟ್ಟಮೊದಲು ಇಂದೂಗಳು ಏರ್ಪಡಿಸಿದ ಹೆಸರುಗಳೆ ಒಟ್ಟು ಪ್ರಪಂಚಕ್ಕೆಲ್ಲ ಅನ್ವಯಿಸುವುದು ಇಂದೂಗಳು ಯಾರಾದರೂ ಗರ್ವಿಸಬೇಕಾದ ವಿಷಯ.

ಪೂರ್ವದಲ್ಲಿ ಸೃಷ್ಠಿ ಆರಂಭವಾದ ದಿನ ಆದಿವಾರ(ಭಾನುವಾರ). ಆದಿವಾರ ವಾರದಲ್ಲಿ ಮೊದಲ ದಿನವಾಗಿರುವುದರಿಂದ, ಆ ದಿನವನ್ನು ಪ್ರತಿವಾರ ಚಿಕ್ಕ ಹಬ್ಬವಾಗಿ ಮಾಡಿಕೊಳ್ಳುತ್ತಿದ್ದರು. ಪ್ರಪಂಚ ಆದಿಯಲ್ಲಿ ಮೊದಲಾದ ದಿನಕ್ಕೆ ಆದಿವಾರವೆಂದೇ ಹೆಸರು ಇಟ್ಟಿದ್ದಾರೆ. ಆದಿ ಎಂದರೆ ಮೊದಲನೆಯದೆಂದು ಅರ್ಥ. ಸೃಷ್ಠಿ ಆದಿವಾರದಿಂದ ಆರಂಭವಾಗಿರುವುದರಿಂದ ಆ ದಿನ ಎಲ್ಲರಿಗೂ ಚಿಕ್ಕ ಹಬ್ಬವಾಗಿ ಇರುತ್ತಿತ್ತು. ಆ ದಿನ ಜನ ತಮ್ಮ ಕೆಲಸಗಳನ್ನು ಬಿಟ್ಟು ಸಂತೋಷವಾಗಿ ಕಾಲವನ್ನು ಕಳೆಯುತ್ತಾ, ರುಚಿಕರವಾದ ಅಡಿಗೆಗಳನ್ನು ಮಾಡಿಕೊಂಡು, ದೇವರಿಗೆ ನೈವೇದ್ಯ ಇಟ್ಟು ತಾವು ತಿನ್ನುತಿದ್ದರು. ವಾರದಲ್ಲಿ ಆರು ದಿನಗಳು ಕೆಲಸಮಾಡುತ್ತಾ, ಒಂದು ಮೊದಲ ದಿನವಾದ ಭಾನುವಾರದಂದು ಕೆಲಸಮಾಡದೆ ಹಬ್ಬ ಮಾಡಿಕೊಳ್ಳುತ್ತಿದ್ದರು. ಪೂರ್ವದಲ್ಲಿ ಪ್ರತಿ ಭಾನುವಾರ ಹಬ್ಬದ ವಾತಾವರಣ ಇರುತ್ತಿತ್ತು. ಈಗಲೂ ಸ್ವಲ್ಪ ಬದಲಾವಣೆಯಿಂದ ಪ್ರತಿ ಆದಿವಾರ ಎಲ್ಲರಿಗೂ ವಿಶ್ರಾಂತಿ ದಿನವಾಗಿ ಮಾಂಸಾಹಾರಿಗಳಿಗೆ ಹಬ್ಬದಂತೆ ಇದೆ. ಪೂರ್ವದಲ್ಲಿ ಭಾನುವಾರ ಎಂದರೆ ಸೃಷ್ಠಿ ಮೊದಲ ದಿನವೆಂಬ ಪವಿತ್ರಭಾವ ಎಲ್ಲರಿಗೂ ಇದ್ದು ಆ ದಿನವನ್ನು ಪವಿತ್ರವಾಗಿಯೇ ಕಳೆಯುತ್ತಿದ್ದರು. ಆದರೆ ಈಗ ಭಾನುವಾರವೆಂದರೆ ದುರಭ್ಯಾಸಪರರಿಗೆ ಇಷ್ಟಾರಾಜ್ಯವಾಗಿ ಇದೆ. ಹೇಗಾದರೇನು ಒಟ್ಟಿನಲ್ಲಿ

ಭಾನುವಾರವೊಂದರ ವಿಶೇಷತೆ ಇಂದಿಗೂ ಉಳಿದುಕೊಂಡಿದೆ. ಹೀಗೆ ಭೂಮಿಮೇಲೆ ಎಲ್ಲಾ ದೇಶಗಳ ಪ್ರಜೆಗಳಿಗೆ ವಾರಗಳು ಏಳಾಗಿ, ಅದರಲ್ಲಿ ಭಾನುವಾರ ಮೊದಲಿನಂತೆ ವಿಶೇಷತೆ ಹೊಂದಿರುವುದನ್ನು ಗಮನಿಸಿದರೆ, ಕಾಲಗಮನದಲ್ಲಿ ಯಾರು ಹೇಗೆ ಬದಲಾದರೂ ಇಂದೂಗಳ ಪವಿತ್ರದಿನ ಇಂದಿಗೂ ಎಲ್ಲರಿಗೂ ರಜಾದಿನವಾಗಿ ಸ್ವಲ್ಪ ಹಬ್ಬದಂತಿರುವುದು ನೋಡಿದರೆ, ಮನುಷ್ಯರು ಸಂಪ್ರದಾಯವನ್ನು ಬಿಟ್ಟರೂ, ಸಂಪ್ರದಾಯ ಮಾತ್ರ ಮನುಷ್ಯರನ್ನು ಬಿಡಲಿಲ್ಲವೆಂದು ತಿಳಿಯುತ್ತಿದೆ. ಪ್ರಪಂಚ ವ್ಯಾಪ್ತವಾಗಿ ಇಂದೂಗಳ ಸಂಪ್ರದಾಯಗಳು ಹೀಗೆ ಎಲ್ಲರ ಹತ್ತಿರ ಇರುವುದನ್ನನುಸರಿಸಿ ಸೃಷ್ಠಿ ಆದಿಯಲ್ಲಿ ಎಲ್ಲಾಕಡೆ ಇಂದೂಗಳೆ ಇರುತ್ತಿದ್ದರೆಂದು, ನಂತರ ಅದು ಬದಲಾಗುತ್ತಾ ಕೊನೆಗೆ ಅನೇಕ ಮತಗಳಾದರೂ ಬಟ್ಟೆಯಲ್ಲಿನ ಇಂಗು ಹೋದರೂ ಬಟ್ಟೆಗೆ ಇಂಗುವಾಸನೆ ಹೋಗದಂತೆ, ಮನುಷ್ಯರಲ್ಲಿ ಇಂದೂತ್ವವು ಹೋದರೂ ಇಂದೂತ್ವದ ವಾಸನೆ ಮನುಷ್ಯರಲ್ಲಿ ಹೋಗದಂತೆ ಸ್ವಲ್ಪವಾದರೂ ವಾರಗಳ ರೂಪದಲ್ಲಿ ಉಳಿದಿದೆಯೆಂದು ತಿಳಿಯುತ್ತಿದೆ.

ಸೃಷ್ಠಿಆದಿಯಲ್ಲಿ ದೇವರಿಂದ ಅದಿಷ್ಠತಗೊಂಡ ಜ್ಞಾನದಿಂದ ತಯಾರಾಗಿರುವುದೆ ಇಂದೂತ್ವ. ಈ ವಿಶಾಲ ಭೂಮಂಡಲದ ಮೇಲೆ, ಇಷ್ಟು ದೇಶಗಳ ನಡುವೆ ವಿಶೇಷವಾಗಿ ನಾವು ವಾಸಿಸುವ ಈ ದೇಶದಲ್ಲಿಯೇ ಇಂದೂಗಳು ಪ್ರಜ್ವಲಿಸಿದ್ದಾರೆ. ಆದ್ದರಿಂದ ಈ ದೇಶ ಇಂದೂದೇಶವಾಗಿದೆ. ಈ ಪ್ರದೇಶದ ಮೇಲೆ ನಾವು ನಿವಾಸವಿದ್ದು, ನಮ್ಮ ಪೂರ್ವಿಕರಿಗೆ ವಾರಸುದಾರರಾಗಿದ್ದು, ನಮ್ಮ ಸಂಪ್ರದಾಯದ ಅರ್ಥ ನಮಗೆ ತಿಳಿಯದೆ ಹೋಗಿರುವುದು, ಸೃಷ್ಠಿ ಆದಿಯಲ್ಲಿ ಯಾವ ದಿನ ಮೊದಲಾಗಿದೆಯೋ ಅದರ ವಿಶೇಷತೆ ಏನೆಂದು ತಿಳಿಯದಿರುವುದು, ಕೊನೆಗೆ ವಾರಕ್ಕೊಮ್ಮೆ ಬರುವ ಭಾನುವಾರದ ಮಹತ್ವ ನಮಗೆ ತಿಳಿಯದೆ ಹೋಗಿ ಕೇವಲ ರಜಾದಿನ ಎಂದುಕೊಳ್ಳುವುದು, ಭಾನುವಾರವೆ ರಜಾದಿನ ಏಕಾಗಿದೆಯೆಂದು ಸ್ವಲ್ಪವೂ ಯೋಚಿಸದೆ ಹೋಗುವುದು, ಈ ವಿಷಯವನ್ನು ಸ್ವಾಮಿಗಳು, ಗುರುಗಳು,

ಪೀಠಾಧಿಪತಿಗಳು ತಿಳಿ ಹೇಳದೆ ಹೋಗಿರುವುದೂ ಈ ಎಲ್ಲವನ್ನು ಪರಿಶೀಲಿಸಿ ನೋಡಿದರೆ ಆದಿ ದಿನದ ಮಹತ್ವವನ್ನು ಕುರಿತು ತಿಳಿಯದ ನಮ್ಮನ್ನು ನೋಡಿ ನಮ್ಮ ಪೂರ್ವಿಕರು ದುಃಖಪಡಬೇಕಾಗಿದ್ದೆ. ಅವರ ವಾರಸುದಾರರಾಗಿರುವುದಕ್ಕೆ ನಾವು ನಾಚಿಕೆ ಪಡಬೇಕಾಗಿದ್ದೆ.

ಈಗಲಾದರೂ ಮೀರಿಹೋಗಿರುವುದು ಏನೂ ಇಲ್ಲ. **'ಆದಿ'** ಯಲ್ಲಿ ಪ್ರಾರಂಭವಾದುದಾದ್ದರಿಂದ ಆ ದಿನಕ್ಕೆ **'ಆದಿ'** ವಾರವೆಂದು ಹೆಸರು ಬಂದಿದೆಯೆಂದು ತಿಳಿದವರಾಗಿ, ಸೃಷ್ಠಿ ಆದಿಯಲ್ಲಿ ಆರಂಭವಾದ ಆದಿ (ಭಾನು) ವಾರವೆ ಯುಗಾದಿಯಾಗಿ ಆಗಾಗ ಪುನಃ ಬರುತ್ತಿದೆಯೆಂದು, ಉಳಿದ ದಿನಗಳಲ್ಲಿ ಬರುವ ಯುಗಾದಿಗಳಿಗಿಂತ ಭಾನುವಾರ ಬರುವ ಯುಗಾದಿಯೇ ಶ್ರೇಷ್ಠವಾದ, ಸ್ವಚ್ಛವಾದ **'ಯುಗಾದಿ'** ಎಂದು ನೀನು ತಿಳಿದುಕೊಂಡು ಇತರರಿಗೆ ತಿಳಿಸುವುದಕ್ಕೆ ಪ್ರಯತ್ನಿಸಬೇಕು. ನೀನು ನಿಜವಾಗಿಯೂ ಇಂದೂವೊಂದರ ವಾರಸುದಾರನಾದರೆ, ಆದಿಯಲ್ಲಿ ಆದಿವಾರದಿಂದ ಆರಂಭವಾದ ಯುಗಾದಿ ಪುನಃ ಈಗ ಬರುತ್ತಿರುವುದರಿಂದ ಆ ದಿನವನ್ನು ಪವಿತ್ರವಾಗಿ, ಅರ್ಥಪೂರ್ಣವಾಗಿ ಕಳೆಯಬೇಕೆಂದು ಪ್ರಯತ್ನಿಸು. ಆದಿಯಲ್ಲಿನ ರಹಸ್ಯಗಳನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು. ಆ ದಿನ ಕಾಲವನ್ನು ಕಥೆಗಳಿಂದ, ಕವಿತ್ವಗಳಿಂದ, ಹಾಡುಗಳಿಂದ, ಪದ್ಯಗಳಿಂದ, ನಾಟಕಗಳಿಂದ ಪಂಚಾಂಗ ಶ್ರವಣದಿಂದ ವ್ಯರ್ಥವಾಗಿ ಕಳೆಯದೆ ದೇವರ ಜ್ಞಾನದಿಂದ ಕಳೆಯಬೇಕು. ನಿಜವಾದ ಇಂದೂ ವಾರಸುದಾರ ನಾಗುವುದಕ್ಕೆ, ಇಂದೂವಾಗಿ ಜೀವಿಸುವುದಕ್ಕೆ ನಿನ್ನಲ್ಲಿ ಇಂದೂತ್ವ ಸ್ವಲ್ಪವಾದರೂ ಸಜೀವವಾಗಿ ಇರುವುದಕ್ಕೆ, ಯುಗಾದಿ ಎನ್ನುವ ಹೆಸರು ಕೂಡ ಭ್ರಷ್ಟು ಹಿಡಿದು ಉಗಾದಿಯಾಗಿ ಕರೆಯಲ್ಪಡುವ ಈಗಿನಕಾಲದಲ್ಲಿ ಮತ್ತೆ **'ಯುಗಾದಿ'** ಒಂದರ ವೈಷಿಷ್ಟತೆಗಳನ್ನು ಸಾರಿ ಹೇಳಬೇಕು. ಆ ದಿನ ಹೊಸಬಟ್ಟೆಗಳನ್ನು ಧರಿಸುವುದಲ್ಲದೆ, ಅದು ಸೃಷ್ಠಿ ಆದಿಯಲ್ಲಿಯೆ ಹೊಸದಿನವೆಂದು, ಮೊದಲು ಆರಂಭವಾದ ದಿನವೆಂದು ವಿವರಿಸಿ, ತಿಳಿಯದ ವರಿಗೆ ತಿಳಿಸಬೇಕು.

ಇಂದೂಗಳಾಗಿ (ಹಿಂದೂಗಳಾಗಿ) ರುವವರು ಕೆಲವರು ಈಗಲೂ ಯುಗಾದಿ ಹಬ್ಬವನ್ನು ಸ್ವಲ್ಪ ಉತ್ತಮ ಭಾವನೆಯಿಂದ ಮಾಡುತ್ತಿದ್ದಾರೆ. ಯುಗಾದಿ ದಿನ ಶುಚಿಯಾಗಿ ಶುಭ್ರವಾಗಿದ್ದೂ ಊಟಕ್ಕಿಂತ ಮೊದಲು ಯುಗಾದಿ ಪಚ್ಚಡಿಯನ್ನು ಪ್ರಸಾದವಾಗಿ ತೆಗೆದುಕೊಳ್ಳುತ್ತಿದ್ದಾರೆ. ಯುಗಾದಿ ಪಚ್ಚಡಿಯನ್ನು ತಪ್ಪದೆ ಆ ದಿನ ತೆಗೆದುಕೊಳ್ಳಬೇಕೆಂದು ಹಿರಿಯರು ಪೂರ್ವದಲ್ಲೆ ತಿಳಿಸಿದ್ದಾರೆ. ಯುಗಾದಿಎಂದರೆ ಅರ್ಥ ತಿಳಿದಿದೆ, ಆದರೆ ಪಚ್ಚಡಿಗೆ ಏನಾದರೂ ವಿಶೇಷತೆ ಇದೆಯಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! **ಪೂರ್ವದಲ್ಲಿ ಈಗ ನಾವಂದುಕೊಳ್ಳುವ ಪಚ್ಚಡಿಯನ್ನು ಪಚ್ಚಡಿಯೆನ್ನದೆ ಪ್ರಸಾದವೆನ್ನುತ್ತಿದ್ದರು.** ಪ್ರಸಾದ ಹೋಗಿ ಪಚ್ಚಡಿಯಾಗಿದೆ. ವಾಸ್ತವವಾಗಿ ಅದನ್ನು ದೇವರ ಪೂಜೆಯಲ್ಲಿ ಇಟ್ಟು ಪೂಜೆ ಮುಗಿದ ನಂತರ ಕುಟುಂಬದಲ್ಲಿರುವವರಿಗೆ ಹಂಚುತ್ತಿದ್ದರು. ಎಲ್ಲರೂ ಒಳ್ಳೆಯ ಭಾವನೆಯಿಂದ ಪ್ರಸಾದವಾಗಿ ತೆಗೆದು ಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ಯುಗಾದಿ ಪ್ರಸಾದವನ್ನು ಕುರಿತು ಅವರ ಭಾವವೇನೊ ಸ್ವಲ್ಪ ವಿವರಿಸಿಕೊಳ್ಳೋಣ.

ಯುಗಾದಿ ಸೃಷ್ಠಿ ಪ್ರಾರಂಭಕ್ಕೆ ಗುರುತೆಂದು ಎಲ್ಲರಿಗೂ ತಿಳಿದಿದೆ. ಸೃಷ್ಠಿ ಆದಿಯಲ್ಲಿಯೇ ಎಲ್ಲಾ ಹುಟ್ಟಿವೆಯೆಂಬುವುದರ ಗುರುತಿಗಾಗಿ ಮಾವಿನಮರ, ಬೇವಿನ ಮರ ಮೊದಲಾದ ಬಹಳ ಮರಗಳು ಹೂವನ್ನು ಬಿಡುತ್ತವೆ. ಹೂ ಬಿಟ್ಟು ಹೂವಿನಿಂದ ಕಾಯಿ ತಯಾರಾಗುವುದು ಯುಗಾದಿ ಸಮಯದಲ್ಲಿಯೆ ನಡೆಯುತ್ತದೆ. ಹೂ, ಕಾಯಿಯನ್ನು ಹೊಸ ಸೃಷ್ಠಿಗೆ ನಿದರ್ಶನವಾಗಿ ದೇವರಿಟ್ಟಿದ್ದಾನೆ. **ಹೂವಿನಿಂದ ಹುಟ್ಟಿರುವುದು "ಕಾಯ"(ಕಾಯಿ). ಗರ್ಭದಿಂದ ಹುಟ್ಟಿರುವುದು "ಕಾಯ"ವು.** ಕಾಯಾಗಲಿ, ಕಾಯವಾಗಲಿ ಸೃಷ್ಠಿ ಆದಿಯಲ್ಲಿ ದೇವರಿಂದ ತಯಾರಾಗಿರುವವೆ. ಆದ್ದರಿಂದ ದೈವಸೃಷ್ಠಿಯಾದ ಜಗತಿ ಎಲ್ಲವೂ ಯುಗಾದಿಯಲ್ಲಿಯೇ ಹುಟ್ಟಿವೆ ಎಂದು ತಿಳಿಸುವುದಕ್ಕೋಸ್ಕರ ಗಿಡಕ್ಕೆ ಆ ಸಮಯದಲ್ಲಿಯೆ ಹೂವು ಹೊರ ಬರುವಹಾಗೆ ದೇವರು ಮಾಡಿದ್ದಾನೆ. ದೇವರು ಸೃಷ್ಠಿಸಿದ ಜೀವಿಗಳಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳಿರುವಹಾಗೆ

ದೇವರೆ ಮಾಡಿದ್ದಾನೆ. ಜೀವಿಗಳಂದರೆ ಮನುಷ್ಯರಾಗಬಹುದು, ಜೀವವಿರುವ ಗಿಡಗಳು ಸಹ ಆಗಬಹುದು. ಮನುಷ್ಯರಲ್ಲಿ ಆರು ಸಂಖ್ಯೆಯಲ್ಲಿ ಗುಣಗಳನ್ನಿಟ್ಟಿರುವ ದೇವರು ಅದೇ ಆರುಸಂಖ್ಯೆಯಲ್ಲಿ ರುಚಿಗಳನ್ನು ಗಿಡಗಳಲ್ಲಿ ತುಂಬಿ ಕಳಿಸಿದ್ದಾನೆ. ಬೇವಿನಮರದಲ್ಲಿ ಕಹಿ, ಹುಣಸೆಮರದಲ್ಲಿ ಹುಳಿ, ತುಂಬೆಮರದಲ್ಲಿ ವಗರು, ಮೆಣಸಿನ ಗಿಡದಲ್ಲಿ ಕಾರ ಮೊದಲಾದ ಆರು ರುಚಿಗಳನ್ನು ವಿವಿಧ ಗಿಡಗಳಲ್ಲಿ ದೇವರೆ ಇಟ್ಟಿದ್ದಾನೆ. ಯುಗಾದಿ ಸಮಯದಲ್ಲಿ ಬಿಡುವ ಹೂಗಳೆಲ್ಲ ರುಚಿಗಳನ್ನು ಹೊಂದಿವೆ. ಆದ್ದರಿಂದಲೇ ಜ್ಞಾನವನ್ನು ತಿಳಿದ ಹಿರಿಯರು ಆರು ರುಚಿಗಳನ್ನು ಹೊಂದಿದ ಹೂಗಳನ್ನೆ ತಂದು ದೇವರ ಮುಂದೆ ಇಟ್ಟು ಅವುಗಳನ್ನೆ ಪ್ರಸಾದವಾಗಿ ಸ್ವೀಕರಿಸುತ್ತಿದ್ದಾರೆ. ಆ ವಿಧವಾಗಿ ಮಾಡುವುದರಲ್ಲಿ ಜ್ಞಾನಿಗಳ ಭಾವ ಈ ವಿಧವಾಗಿ ಇರುತ್ತಿತ್ತು. ನಮ್ಮಲ್ಲಿರುವ ಆರು ಗುಣಗಳಿಗೆ ಸಾಕ್ಷಿಯಾಗಿ ಆರು ರುಚಿಗಳಿರುವ ಹೂಗಳನ್ನು ದೇವರಾದ ನಿನಗೆ ತೋರಿಸುತ್ತಿದ್ದೇವೆ. ಆರು ರುಚಿಗಳನ್ನು ನಾವು ತಿಂದು ಅವುಗಳನ್ನು ಇಲ್ಲದಹಾಗೆ ಮಾಡುತ್ತಿದ್ದೇವೆ. ಅದೇ ವಿಧವಾಗಿ ನಮ್ಮಲ್ಲಿನ ಆರು ಗುಣಗಳನ್ನು ಇಲ್ಲದ ಹಾಗೆ ಮಾಡಿಕೊಳ್ಳುತ್ತೇವೆಂದು, ಈ ಕಾರ್ಯ ಮಾಡಿ ತೋರಿಸುತ್ತಿದ್ದೇವೆಂದು ಪೂರ್ವದಲ್ಲಿ ಜ್ಞಾನಿಗಳೆನ್ನುತ್ತಿದ್ದರು. ಆ ವಿಧವಾಗಿ ಆ ಆರು ಗುಣಗಳಿಗೆ ಬದಲಾಗಿ ಆರು ರುಚಿಗಳ ಹೂಗಳನ್ನು ಪ್ರಸಾದವಾಗಿ ಮಾಡಿ ತಿಂದು ಜೀರ್ಣಾಶಯದಲ್ಲಿನ ಜಠರಾಗ್ನಿಯು ಸುಟ್ಟುಹಾಕುವಂತೆ, ನಮ್ಮ ಆರು ಗುಣಗಳ ಕರ್ಮಗಳನ್ನು ತಲೆಯಲ್ಲಿನ ಜ್ಞಾನಾಗ್ನಿಯಿಂದ ಸುಟ್ಟುಹಾಕುತ್ತೇವೆಂದು ಅವರ ಭಾವವಿರುತ್ತಿತ್ತು. ಈ ವಿಧವಾಗಿ ನಡೆಯುವ ಷಟ್ ರುಚಿಗಳ ಪ್ರಸಾದಗಳು ಕಾಲಕ್ರಮೇಣ ಬದಲಾಗುತ್ತಾ ಬಂದು ಕೊನೆಗೆ ಒಂದು ಬೇವಿನ ಹೂವನ್ನು ಮಾತ್ರ ತೆಗೆದುಕೊಂಡು ಉಳಿದ ರುಚಿಗಳಿಗೋಸ್ಕರ ಬೆಲ್ಲ, ಹುಣಸೆಹಣ್ಣು ಮೊದಲಾದವುಗಳನ್ನು ಅದರಲ್ಲಿ ಬೆರೆಸಿ ಯುಗಾದಿ ಪಚ್ಚಡಿ ರೂಪದಲ್ಲಿ ತೆಗೆದುಕೊಳ್ಳುತ್ತಿದ್ದಾರೆ. ಕೆಲವರಾದರೆ ಹೆಸರಿಗೆ ಬೇವಿನಹೂವನ್ನು ಹಾಕಿ ಯಾವ ಕಹಿ ಇಲ್ಲದಂತಿರಲು ಸಕ್ಕರೆ ಬೆಲ್ಲ ಹೆಚ್ಚಿನ ಪ್ರಮಾಣದಲ್ಲಿ ಹಾಕಿ ಪಾಯಸದ ಮಾದರಿಯಂತೆ ಮಾಡಿಕೊಂಡು ದಿನವೆಲ್ಲಾ ತಿನ್ನುತ್ತಿದ್ದಾರೆ. ಹಾಗೆ ಮಾಡುವುದರಿಂದ ಯುಗಾದಿ ಪ್ರಸಾದ ಯುಗಾದಿ

ಪಚ್ಚಡಿಯಾಗಿ ಬದಲಾಗಿಹೋಗಿ ಕೊನೆಗೆ ಅದು ಯುಗಾದಿ ಪಾಯಸವಾಗಿ ಮಾರ್ಪಟ್ಟಿದೆ. ಸನಾತನವಾಗಿ ಬಂದಿರುವ ಯುಗಾದಿ ಹಬ್ಬ ಇಂದೂ ಸಂಪ್ರದಾಯಗಳಲ್ಲಿ ಮುಖ್ಯವಾದುದು. ಇಂದೂಸಂಪ್ರದಾಯಗಳಲ್ಲಿನ ಪ್ರತಿ ಕಾರ್ಯಕ್ಕೆ ಬಹಳ ಅರ್ಥವಿರುತ್ತದೆ. ಹಿರಿಯರು ಇಟ್ಟಿರುವ ಮೂಲಾರ್ಥವನ್ನು ಬಿಟ್ಟು ಅರ್ಥವಿಲ್ಲದೆ ನಮ್ಮ ಇಷ್ಟಬಂದಹಾಗೆ ಮಾಡುವ ಕಾರ್ಯಗಳು ಸಂಪ್ರದಾಯಗಳೆನಿಸುವುದಿಲ್ಲ. ಆದ್ದರಿಂದ ಯುಗಾದಿಯನ್ನು ಹಿರಿಯರು ಹೇಳಿದಹಾಗೆ, ಅವರು ಆಚರಿಸಿದಂತೆ ಈಗಿನಿಂದಾದರೂ ನಾವು ಮಾಡೋಣ. ಯುಗಾದಿಯಲ್ಲಿ ಹೂವಿನ ವಿಶಿಷ್ಠತೆಯನ್ನು ಅರಿತು, ಜಗತಿ ಒಂದರ ಹುಟ್ಟುವಿಕೆ ಆ ದಿನವೆ ನಡೆದಿದೆಯೆಂದು ತಿಳಿದು, ಪವಿತ್ರಭಾವದಿಂದ ಆಚರಿಸಿದರೆ ಅದು ನಿಜವಾದ ಯುಗಾದಿ ಹಬ್ಬವಾಗುತ್ತದೆ. ಹಾಗೆ ಆಗದೆಹೋದರೆ ಯುಗಾದಿ ಉಗಾದಿಯಾಗಿ, ಹಬ್ಬವು ವ್ಯರ್ಥವಾಗಿ ಬದಲಾಗಿಹೋಗುತ್ತದೆ. ಹಾಗಾಗದೆ ಯುಗಾದಿಯನ್ನು ನಿಜವಾದ ಇಂದೂಗಳ ಹಬ್ಬವಾಗಿಯೆ ಅರ್ಥಮಾಡಿಕೊಂಡು ಮಾಡೋಣ.

# ಭೋಗಿ – ಉರಿ (ಬೆಂಕಿ)

ಭೋಗಿ ಉರಿಗಳೆಂಬ ಮಾತನ್ನು ಬಹುಶ ಸಂಕ್ರಾಂತಿ ಹಬ್ಬದ ಸಂದರ್ಭದಲ್ಲಿ ಕೇಳುತ್ತಿರುತ್ತೇವೆ. ಯುಗಾದಿ ಹಬ್ಬಕ್ಕೆ ವಿಶೇಷತೆ ಇರುವಂತೆ ಭೋಗಿಹಬ್ಬಕ್ಕೂ ಸಂಕ್ರಾಂತಿ ಹಬ್ಬಕ್ಕೂ ಸಹ ವಿಶೇಷತೆ ಇದೆ. ಯುಗಾದಿಗಾಗಲಿ, ಸಂಕ್ರಾಂತಿಗಾಗಲಿ ಆಧ್ಯಾತ್ಮಿಕತೆಯನ್ನೂ, ಗ್ರಹಗಳ ಪ್ರಯಾಣವನ್ನನುಸರಿಸಿ ವಿಶೇಷತೆ ಇದೆ. ಸೂರ್ಯನು ಕಾಲಚಕ್ರದಲ್ಲಿ ಕಟಕರಾಶಿಯಲ್ಲಿ ಪ್ರವೇಶಿಸಿದಾಗ ಕಟಕ ಸಂಕ್ರಮಣ ಎಂದೂ, ಅದೇ ವಿಧವಾಗಿ ಸೂರ್ಯನು ಮಕರರಾಶಿಯಲ್ಲಿ ಪ್ರವೇಶಿಸಿದಾಗ ಮಕರ ಸಂಕ್ರಾಂತಿ ಎಂದೂ ನಮ್ಮ ಹಿರಿಯರು ಹೇಳುತ್ತಿದ್ದರು. ಈ ರಾಶಿಗಳೆನ್ನುವವು ಏನು, ಏತಕ್ಕಿವೆ? ಎಂದು ಯೋಚಿಸಿದರೆ ಸ್ವಲ್ಪ ವಿಚಾರ ತಿಳಿಯಬಲ್ಲದು. ಮನುಷ್ಯನ ಆಧ್ಯಾತ್ಮಿಕ ಪಾಠದಲ್ಲಿ ಕಾಲಚಕ್ರ ಎಂಬುದು ಬಹಳ

ಪ್ರಾಮುಖ್ಯವಾದುದು. ಕಾಲಚಕ್ರವು ಒಟ್ಟು ಹನ್ನೆರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಮಾನವನ ಜ್ಯೋತಿಷ್ಯವು ಈ ಹನ್ನೆರಡು ಭಾಗಗಳನ್ನು ಆಧಾರ ಮಾಡಿಕೊಂಡಿದೆ. ಕಾಲಚಕ್ರದಲ್ಲಿದ್ದ ಕರ್ಮವನ್ನು ಪರಿಪಾಲನೆ ಮಾಡುವ ನವಗ್ರಹಗಳು ನಿರ್ಣಿತಕಾಲದ ಪ್ರಕಾರ ಈ ಕಾಲಚಕ್ರದಲ್ಲಿಯೆ ತಿರುಗುತ್ತಿರುತ್ತದೆ. ಎಲ್ಲದಕ್ಕಿಂತ ಮುಖ್ಯಗ್ರಹ ಮತ್ತು ಮೊದಲ ಗ್ರಹವಾದ ಸೂರ್ಯನು ಕಾಲಚಕ್ರದಲ್ಲಿ ಅತ್ಯಂತ ಮಹತ್ವ ಹೊಂದಿದವನು. ಸೂರ್ಯನು ಮೊದಲನೆಯನಾದ್ದರಿಂದ ಆತನಿಗೆ ಆದಿತ್ಯನೆಂದು ಸಹ ಹೆಸರು ಇದೆ. ಜ್ಯೋತಿಷ್ಯಶಾಸ್ತ್ರದಲ್ಲಿ ಸೂರ್ಯನನ್ನನು ಸರಿಸಿಯೇ ಗ್ರಹಚಾರ ನಿರ್ಣಯಿಸಲ್ಪಡುತ್ತಿದೆ. ಕಾಲಚಕ್ರದಲ್ಲಿನ ಹನ್ನೆರಡು ಭಾಗಗಳ ಹೆಸರುಗಳು ಕ್ರಮವಾಗಿ ಹೀಗೆ ಇವೆ. 1) ಮೇಷ 2) ವೃಷಭ 3) ಮಿಥುನ 4) ಕರ್ಕಾಟಕ 5) ಸಿಂಹ 6) ಕನ್ಯ 7) ತುಲ 8) ವೃಶ್ಚಿಕ 9) ಧನಸ್ಸು 10) ಮಕರ 11) ಕುಂಭ 12) ಮೀನ. ಕಾಲಚಕ್ರವನ್ನು ಅದರಲ್ಲಿನ ಭಾಗಗಳನ್ನು ಈ ಕೆಳಗಿನ ಚಿತ್ರ ಪಟಗಳಲ್ಲಿ ತಿಳಿಸಲಾಗಿದೆ.

ಕಾಲಚಕ್ರದಲ್ಲಿನ ಅರ್ಧಭಾಗದಲ್ಲಿ ಸೂರ್ಯನ ಸಂಚಾರ ಇರುವಾಗ ಅದನ್ನು "ಆಯನ" ಎನ್ನುತ್ತಾರೆ. ಇದನ್ನನುಸರಿಸಿಯೇ ಎರಡು ಆಯಣಗಳು ಇವೆಯೆಂದು, ಅವುಗಳೆ ಉತ್ತರಾಯಣ, ದಕ್ಷಿಣಾಯಣ ಎಂದು ತಿಳಿಯಬೇಕು. ಸೂರ್ಯನು ಕಾಲಚಕ್ರದಲ್ಲಿನ ಒಂದು ಭಾಗವನ್ನು ಕ್ರಮಿಸುವುದಕ್ಕೆ ಒಂದು




**ಕಾಲ ಚಕ್ರ**



ತಿಂಗಳ ದಿನಗಳು ಹಿಡಿಯುತ್ತದೆ. ಇದನ್ನನುಸರಿಸಿಯೆ ನಮಗೆ ತಿಂಗಳ ಹೆಸರುಗಳು ಸಹ ನಿರ್ಣಯಿಸಿದ್ದಾರೆ. ಅವು ಕ್ರಮವಾಗಿ 1) ಚೈತ್ರ 2) ವೈಶಾಖ 3) ಜ್ಯೇಷ್ಟ 4) ಅಷಾಢ 5) ಶ್ರಾವಣ 6) ಭಾದ್ರಪದ 7) ಆಶ್ವೀಜ 8) ಕಾರ್ತೀಕ 9) ಮಾರ್ಗಶೀರ 10) ಪುಷ್ಯ 11) ಮಾಘ 12) ಫಾಲ್ಗುಣ. ಕಾಲಚಕ್ರದಲ್ಲಿ ಸೂರ್ಯನು 1) ಮೇಷರಾಶಿ ಭಾಗದಲ್ಲಿ ಪ್ರಯಾಣಿಸುವ ಮೂವತ್ತು ದಿನಗಳನ್ನು ಚೈತ್ರಮಾಸವೆಂದಿದ್ದಾರೆ 2) ವೃಷಭರಾಶಿಯಲ್ಲಿರುವ ಕಾಲವನ್ನು ವೈಶಾಖ ಮಾಸವೆಂದಿದ್ದಾರೆ. 3) ಮಿಥುನರಾಶಿ ಕಾಲವನ್ನು ಜೇಷ್ಟಮಾಸ ವೆಂದಿದ್ದಾರೆ. 4) ಕರ್ಕಾಟಕರಾಶಿಯಲ್ಲಿರುವಾಗ ಅಷಾಢಮಾಸವೆಂದಿದ್ದಾರೆ. 5) ಸಿಂಹರಾಶಿ ಯಲ್ಲಿರುವಾಗ ಶ್ರಾವಣಮಾಸವೆಂದಿದ್ದಾರೆ. 6) ಕನ್ಯಾರಾಶಿಯಲ್ಲಿರು ವಾಗ ಭಾದ್ರಪದಮಾಸವೆಂದಿದ್ದಾರೆ 7) ತುಲಾರಾಶಿಯಲ್ಲಿರುವಾಗ ಆಶ್ವೀಜಮಾಸ ವೆಂದಿದ್ದಾರೆ 8) ವೃಶ್ಚಿಕರಾಶಿಯಲ್ಲಿರುವಾಗ ಕಾರ್ತಿಕಮಾಸವೆಂದಿದ್ದಾರೆ. 9) ಧನಸ್ಸು ರಾಶಿಯಲ್ಲಿರುವಾಗ ಮಾರ್ಗಶಿರಮಾಸವೆಂದಿದ್ದಾರೆ. 10) ಮಕರರಾಶಿ ಯಲ್ಲಿ ಇರುವಾಗ ಪುಷ್ಯಮಾಸವೆಂದಿದ್ದಾರೆ. 11) ಕುಂಭರಾಶಿಯಲ್ಲಿರುವಾಗ ಮಾಘ ಮಾಸವೆಂದಿದ್ದಾರೆ. 12) ಮೀನರಾಶಿಯಲ್ಲಿ ಇರುವಾಗ ಫಾಲ್ಗುಣಮಾಸ ವೆಂದಿದ್ದಾರೆ.

ಕಾಲಚಕ್ರದಲ್ಲಿನ ಹನ್ನೆರಡು ಭಾಗಗಳಲ್ಲಿ ಆರು ಭಾಗಗಳನ್ನು ಉತ್ತರಾ ಯಣವಾಗಿ, ಉಳಿದ ಆರು ಭಾಗಗಳನ್ನು ದಕ್ಷಿಣಾಯಣವಾಗಿ ಲೆಕ್ಕಹಾಕಲಾಗುತ್ತದೆ. ಸೂರ್ಯನು ಮಕರರಾಶಿಯಲ್ಲಿ ಪ್ರವೇಶಿಸಿದ ಪುಷ್ಯಮಾಸದಿಂದ ಮಿಥುನರಾಶಿ ಯಲ್ಲಿ ಇರುವ ಜ್ಯೇಷ್ಟಮಾಸದವರೆಗೂ ಆರು ತಿಂಗಳ ಕಾಲವನ್ನು ಉತ್ತರಾಯಣ ವೆಂದು, ಹಾಗೆಯೇ ಸೂರ್ಯನು ಕಟಕ ರಾಶಿಯಲ್ಲಿ ಪ್ರವೇಶಿಸಿದ ಅಷಾಢಮಾಸ ದಿಂದ ಧನಸ್ಸುರಾಶಿಯಲ್ಲಿರುವ ಮಾರ್ಗಶಿರ ಮಾಸದವರೆಗೂ ಆರುತಿಂಗಳ ಕಾಲವನ್ನು ದಕ್ಷಿಣಾಯಣವೆಂದು ಹೇಳುವುದು ನಡೆಯುತ್ತಿದೆ. ಕಾಲಚಕ್ರದಲ್ಲಿ ಮೊದಲನೆಯದಾದ ಮೇಷರಾಶಿಯನ್ನು ಒಂದನೆಯದಾಗಿ ತೆಗೆದುಕೊಂಡರೆ ಕೊನೆಯದಾದ ಮೀನ ಹನ್ನೆರಡನೆಯದಾಗುತ್ತದೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರ

ಒಂದನೆರಾಶಿ ಮಾನವನ ಜನ್ಮರಾಶಿ ಆಗುತ್ತದೆ, ಹಾಗೆಯೇ ಹನ್ನೆರಡನೆಯದು ಮರಣರಾಶಿ ಆಗುತ್ತದೆ. ಮನುಷ್ಯನ ಹುಟ್ಟು, ಶರೀರ ಲಭ್ಯವೊಂದರ ವಿಷಯಗಳು ಮೊದಲ ಸ್ಥಾನದಲ್ಲಿರುವಾಗ, ಮರಣ ವಿಷಯವೆಲ್ಲವು ಕೊನೆಯ ಹನ್ನೆರಡನೆ ಸ್ಥಾನದಲ್ಲಿ ಇರುತ್ತದೆ. ಮನುಷ್ಯನ ಹುಟ್ಟು ಮತ್ತು ಮರಣಗಳ ವಿಷಯಗಳು ಉತ್ತರಾಯಣ ಭಾಗದಲ್ಲಿಯೆ ಇವೆ. ಉತ್ತರಾಯಣ ಭಾಗ ಜ್ಞಾನಸಂಬಂಧ ವಾದುದೆಂದು, ದಕ್ಷಿಣಾಯಣ ಭಾಗ ಅಜ್ಞಾನ ಸಂಬಂಧವಾದು ದೆಂದು ಸಹ ಹೇಳಲಾಗಿದೆ. ಉತ್ತರಾಯಣ ಕಾಲದಲ್ಲಿ ಮರಣಿಸಿದರೂ, ಹುಟ್ಟಿದರೂ ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗುವುದಕ್ಕೆ ಅವಕಾಶವಿದೆ. ಅಷ್ಟೇ ಅಲ್ಲದೆ ಉತ್ತರಾಯಣ ಕಾಲದಲ್ಲಿ ಹುಟ್ಟಿದವರು ದೈವಸಂಬಂಧದ ಜ್ಞಾನಹೊಂದಿ ಜ್ಞಾನಿಯಾಗಿ




ಕರ್ಮಚಕ್ರ

ಜನ್ಮಿಸುವುದಕ್ಕೂ ಸಹ ಅವಕಾಶವಿದೆ. ಸೂರ್ಯನು ಉತ್ತರಾಯಣದಲ್ಲಿ ಪ್ರವೇಶಿಸಿರುವ ಆರು ತಿಂಗಳ ಕಾಲವು ದೈವಪರವಾಗಿ ಪ್ರಾಮುಖ್ಯತೆ ಹೊಂದಿರುವುದರಿಂದ ಆ ಕಾಲವನ್ನು ಉತ್ತರಾಯಣ ಉತ್ತಮಕಾಲವೆಂದು ಪೂರ್ವದಲ್ಲಿ ಕರೆಯುತ್ತಿದ್ದರು. ಕಾಲಕ್ರಮದಲ್ಲಿ ಉತ್ತರಾಯಣ ಉತ್ತಮಕಾಲ ಬದಲಾವಣೆ ಹೊಂದಿ ಉತ್ತರಾಯಣ ಪುಣ್ಯಕಾಲವೆಂದು ಹೇಳಲಾಗುತ್ತಿದೆ.

ಮೇಷ, ವೃಷಭ, ಮಿಥುನ ರಾಶಿಗಳಲ್ಲಿನ ಮೂರು ತಿಂಗಳ ಕಾಲವನ್ನು, ಮತ್ತು ಮಕರ, ಕುಂಭ, ಮೀನರಾಶಿಗಳಲ್ಲಿನ ಮೂರು ತಿಂಗಳ ಕಾಲವನ್ನು ಉತ್ತರಾಯಣವೆಂದು ಹೇಳಿಕೊಂಡಿದ್ದೇವೆ. ಉಳಿದ ಆರು ತಿಂಗಳಕಾಲವು ದಕ್ಷಿಣಾಯಣವಾಗಿ, ಲೆಕ್ಕಿಸಿಕೊಳ್ಳುತ್ತಿದ್ದೇವೆ. ಉತ್ತರಾಯಣ ಉತ್ತಮವಾದುದಾಗಿ ದೈವಪರವಾಗಿ ಲೆಕ್ಕಿಸಿಕೊಂಡು, ದಕ್ಷಿಣಾಯಣ ಪ್ರಪಂಚಪರವಾದ ಭೋಗಗಳಿಗೆ ಪ್ರತೀಕವಾಗಿ ಹೇಳಿಕೊಳ್ಳುತ್ತಿದ್ದೇವೆ. ದಕ್ಷಿಣಾಯಣ ಪ್ರಕೃತಿ ಭೋಗಗಳಿಗೆ ಗುರುತಾಗಿದೆ. ಪ್ರಪಂಚದಲ್ಲಿನ ಅನುಭವಗಳನ್ನು ಭೋಗಗಳೆನ್ನುತ್ತಿದ್ದೇವೆ. ಪ್ರಪಂಚ ಸಂಬಂಧ ವಿಷಯಗಳನ್ನು ಅನುಭವಿಸುವುದನ್ನು ಭೋಗವೆನ್ನುತ್ತಿರುವಾಗ! ದೈವಸಂಬಂಧ ಆತ್ಮವನ್ನು ಅನುಭವಿಸುವುದನ್ನು ಯೋಗವೆನ್ನುತ್ತಿದ್ದೇವೆ. ಭೋಗದಲ್ಲಿ ಕರ್ಮಗಳು ಅನುಭವಿಸಲ್ಪಡುತ್ತಿವೆ. ಯೋಗದಲ್ಲಿ ಕರ್ಮಗಳು ಸುಡಲ್ಪಡುತ್ತಿವೆ. ದಕ್ಷಿಣಾಯಣವನ್ನು ಭೋಗಗಳಿಗೆ ಗುರುತಾಗಿ ಹೇಳಿಕೊಂಡಿದ್ದಾರೆ. ಭೋಗಗಳು ಅಜ್ಞಾನಕ್ಕೆ ಸಂಬಂಧಿಸಿರುವವು, ಆದ್ದರಿಂದ ದಕ್ಷಿಣಾಯಣವನ್ನು ಪ್ರಪಂಚಸಂಬಂಧ ಭೋಗಗಳ ಚಿಹ್ನೆಯಾಗಿ ವ್ಯಕ್ತಪಡಿಸಿದ್ದಾರೆ. ಉತ್ತರಾಯಣವನ್ನು ದೈವಸಂಬಂಧ ಯೋಗಗಳಿಗೆ ಗುರುತಾಗಿ ಹೇಳಿಕೊಂಡಿದ್ದಾರೆ. ಈ ವಿಧವಾಗಿ ಹೇಳುವುದೆ ಅಲ್ಲದೆ ಎಲ್ಲರಿಗೂ ಸ್ವಲ್ಪ ಗುರುತಿರುವಂತೆ ಕೂಡ ಮಾಡಿದ್ದಾರೆ. ಪ್ರತಿ ಮನುಷ್ಯನಿಗೂ ಭೋಗಗಳನ್ನು ಅನುಭವಿಸುವುದು ಅಭ್ಯಾಸವಾಗಿ ಹೋಗಿದೆ. ಭೋಗಗಳೆಂದರೆ ಕೇವಲ ಸುಖಗಳೆಂದುಕೊಳ್ಳಬಾರದು. ಕಷ್ಟಗಳನ್ನು ಸುಖಗಳನ್ನು ಎರಡನ್ನು ಭೋಗಗಳೆನ್ನುತ್ತಿದ್ದಾರೆ. ಭೋಗಗಳೆಂದರೆ ಅನುಭವಿಸಲ್ಪಡುವವು ಎಂದರ್ಥ.

ಹಾಗೆಯೇ ಪ್ರತಿ ಮನುಷ್ಯ ಯೋಗಗಳನ್ನು ಹೊಂದಲಾರದೆ ಹೋಗುತ್ತಿದ್ದಾನೆ. ಯೋಗಗಳೆಂದರೆ ಭೋಗಗಳಿಗೆ ವಿರುದ್ಧವಾಗಿವೆ. ಕರ್ಮಾನುಭವಕ್ಕೆ ಬಾರದಿರುವವೆ ಯೋಗಗಳು, ಕರ್ಮವನ್ನು ಸುಡುವವು ಯೋಗಗಳು, ಜ್ಞಾನವೆಂಬ ಅಗ್ನಿ ನಿಲಯಗಳೇ ಯೋಗಗಳು. ಕರ್ಮಗಳನ್ನು ಸುಡುವುದು ಜ್ಞಾನಾಗ್ನಿ ಮಾತ್ರವೆಯೆಂದು ಮರೆಯಬಾರದು. ಜ್ಞಾನಾಗ್ನಿ ನಿಲಯವಾದ ಯೋಗಗಳಿಗೆ ಗುರುತಾಗಿ ಉತ್ತರಾಯಣ, ಅನುಭವಗಳಿಗೆ ನಿಲಯಗಳಾದ ಭೋಗಗಳಿಗೆ ಗುರುತಾಗಿ ದಕ್ಷಿಣಾಯಣ, ಜ್ಞಾಪಕವಿರುವಹಾಗೆ ವರ್ಷದಲ್ಲಿ ಒಂದು ಹಬ್ಬವನ್ನು ಇಟ್ಟಿದ್ದಾರೆ. ಅದೇ ಸಂಕ್ರಾಂತಿಹಬ್ಬ, ಇದನ್ನೇ ಮಕರಸಂಕ್ರಾಂತಿ ಎನ್ನುತ್ತಾರೆ.

ಮಕರ ರಾಶಿಯೊಳಗೆ ಸೂರ್ಯನು ಪ್ರವೇಶಿಸುವುದನ್ನು ಮಕರ ಸಂಕ್ರಾಂತಿ ಎನ್ನುತ್ತಿದ್ದೇವೆ. ಸಾಧಾರಣವಾಗಿ ಜನವರಿ 14ನೇ ದಿನಾಂಕ ಸಂಕ್ರಾಂತಿ ಬರುತ್ತಿರುತ್ತದೆ. ಬಹುಶ ಕೆಲವು ವರ್ಷಗಳಿಗೊಂದುಸಲ ಜನವರಿ 15ನೇ ದಿನಾಂಕದಂದು ಸಂಕ್ರಾಂತಿ ಬರುತ್ತಿದೆ. ಜನವರಿ 13ನೇ ದಿನಾಂಕದವರೆಗೂ ದಕ್ಷಿಣಾಯಣ ಇರುವಾಗ, 14ನೇ ತಾರೀಖಿನಿಂದ ಉತ್ತರಾಯಣವಾಗುತ್ತದೆ. ದಕ್ಷಿಣಾಯಣ ಭೋಗಗಳಿಗೆ ಗುರುತು ಆದ್ದರಿಂದ ಆ ವಿಷಯ ಜ್ಞಾಪಕವಿರುವ ಹಾಗೆ ಜನವರಿ 13ನೇ ದಿನಾಂಕವನ್ನು ಸಂಕ್ರಾಂತಿಯ ಮುಂದಿನ ದಿನವನ್ನು ಭೋಗಿ ಎಂದಿದ್ದಾರೆ. ಭೋಗಿ ನಂತರ ಸಂಕ್ರಾಂತಿ ಎನ್ನುವುದು ಸಹಜವಾಗಿ ಇರುವುದೆ. ಭೋಗಿ ದಿನದ ರಾತ್ರಿಯಲ್ಲಿ ಹುರಿಹಾಕಿ ಭೋಗಿ ಹುರಿಗಳು ಎಂದು ಹೆಸರಿಟ್ಟಿರುವುದು ಸಹ ನಡೆದಿದೆ. ಭೋಗಿಯನ್ನು ಗುರುತಾಗಿ ಹೇಳಿಕೊಳ್ಳುವುದು ಆ ರಾತ್ರಿ ವೇಳೆ ಹುರಿ ಹಾಕುವುದು ಎಲ್ಲರೂ ಮಾಡುತ್ತಿರುವ ಕೆಲಸವೆ ಆಗಲಿ ಅದರ ಅರ್ಥ, ವಿವರ ಬಹಳಜನರಿಗೆ ತಿಳಿದಿಲ್ಲವೆಂದುಕೊಳ್ಳುತ್ತೇವೆ.

ದಕ್ಷಿಣಾಯಣವು ಅಜ್ಞಾನ ಸಂಬಂಧ, ಪ್ರಪಂಚ ಸಂಬಂಧದ ಗುರುತೆಂದು ಮೊದಲೆ ಹೇಳಿಕೊಂಡಿದ್ದೇವೆ. ಪ್ರಪಂಚ ಅನುಭವಗಳಿಗೆ ತಾರ್ಕಾಣೆ(ಸಾಕ್ಷಿ) ಯಾಗಿರುವ ದಕ್ಷಿಣಾಯಣವನ್ನು ಭೋಗಿ ಎನ್ನುವ ಹೆಸರಿನಿಂದ

ಕೊನೆಯ ದಿನದಂದು ಜ್ಞಾಪಕ ಮಾಡಿಕೊಳ್ಳುತ್ತಾ, ನಮ್ಮ ಜೀವನದಲ್ಲಿ ಈದಿನದಿಂದ ಭೋಗಗಳು ಹೋಗಿ ಯೋಗಗಳು ಬರಬೇಕೆಂದು ಪೂರ್ವದಲ್ಲಿ ಕೋರು ಕೊಳ್ಳುತ್ತಿದ್ದರು. ಭೋಗಗಳು ಎಂದರೆ ಅನುಭವಗಳಿಗೆ ಕಾರಣವಾದ ಕರ್ಮ ಹೋಗಬೇಕೆಂದು, ಭಗವದ್ಗೀತೆಯಲ್ಲಿ ಹೇಳಿದಹಾಗೆ ಕರ್ಮಗಳನ್ನು ಕಟ್ಟಿಗೆಗಳಾಗಿ, ಜ್ಞಾನವನ್ನು ಅಗ್ನಿಗೆ ಹೋಲಿಸಿ ಆ ರಾತ್ರಿಗೆ ಹುರಿ ಹಾಕುತ್ತಿದ್ದರು. ಅನುಭವಕ್ಕೆ ಬರುವಂತಹ ಕರ್ಮಗಳನ್ನು ಇಲ್ಲದಹಾಗೆ ಮಾಡುವುದರ ಚಿಹ್ನೆಯೆ ಭೋಗಿ ಉರಿಗಳು. ದಕ್ಷಿಣಾಯಣ ಕೊನೆಯಲ್ಲಿ ಭೋಗಗಳಿಗೆ ಅಂತ್ಯ ಹೇಳುವುದು, ಭೋಗಿಉರಿಯನ್ನು ಉರಿಸುವುದು, ಹಾಗೆಯೇ ಉತ್ತರಾಯಣ ಮೊದಲಿನಲ್ಲಿ ಯೋಗಕ್ಕೆ ಅಹ್ವಾನ ಹೇಳುವುದು ಸಂತಸದ ವಿಚಾರ. ಆದ್ದರಿಂದ ಆ ದಿನವನ್ನು ಸಂಕ್ರಾಂತಿ ಉತ್ಸವವಾಗಿ ಹಬ್ಬ ಮಾಡಿಕೊಳ್ಳುವುದು ಪೂರ್ವಾಚಾರ. ಪೂರ್ವದಲ್ಲಿ ಹಿರಿಯರು ಭಾವಯುಕ್ತವಾಗಿ ಮಾಡಿದ ಆಚಾರ ಇಂದಿಗೂ ನಡೆಯುತ್ತಿದ್ದರೂ ಭೋಗಿ ಎಂದು ಏಕೆ ಕರೆಯುತ್ತಿದ್ದೇವೆ, ಭೋಗಿ ಹುರಿ ಏಕೆ ಹಾಕುತ್ತಿದ್ದೇವೆ, ಸಂಕ್ರಾಂತಿ ಹಬ್ಬ ಏಕೆ ಮಾಡುತ್ತಿದ್ದೇವೆಂದು ತಿಳಿಯದು.

"ಜ್ಞಾನಾಗ್ನಿ ಸರ್ವಕರ್ಮಾಣಾಂ ಭಸ್ಮಸಾತ್" ಜ್ಞಾನವೆಂಬ ಅಗ್ನಿಯಿಂದ ಸರ್ವಕರ್ಮಗಳು ಭಸ್ಮಿಪಟಲವಾಗುತ್ತವೆಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಭೋಗಗಳಿಗಿರುವ ಕರ್ಮಗಳನ್ನು ಜ್ಞಾನವೆಂಬ ಅಗ್ನಿಸುಡುವುದನ್ನೆ ಭೋಗಿ ಹುರಿ ಎನ್ನುತ್ತೇವೆ. ಸಂಕ್ರಾಂತಿಗಿಂತ ಮುಂದಿನ ದಿನ ಅಜ್ಞಾನಕ್ಕೆ ಕೊನೆಯದಿನ ಆಗಬೇಕೆಂದು, ಸಂಕ್ರಾಂತಿ ಮೊದಲ ದಿನ ಜ್ಞಾನಕ್ಕೆ ಆರಂಭ ದಿನ ಆಗಬೇಕೆಂದು, ಅಂತರಾರ್ಥವನ್ನು ಬಾಹ್ಯರ್ಥವಾಗಿ ತಿಳಿಸುತ್ತಾ ಪೂರ್ವದಲ್ಲಿ ಭೋಗಿ ಉರಿ ಹಾಕುವುದು ಅಂದಿನ ಆಚಾರ ಇಂದಿಗೂ ಇದೆ. ಆಚಾರವಿದೆ ಅರ್ಥವಿಲ್ಲ. ಈದಿನದ ಆಚಾರಕ್ಕೆ ಆದಿನದ ಅರ್ಥವನ್ನು ಜೋಡಿಸಿಕೊಂಡು ಭೋಗಿಉರಿ ಹಾಕುವುದು ಮಾಡಿದರೆ ಎಷ್ಟೋ ಮೌಲ್ಯ ಭರಿತ ಕೆಲಸವಾಗುತ್ತದೆ. ಆದ್ದರಿಂದ ಅಂದಿನ ಉದ್ದೇಶವನ್ನರಿತು ಇಂದು ಕೆಲಸಮಾಡಿದರೆ ಒಂದು ದಿನಕ್ಕೆ ಅದು ನೆರವೇರುತ್ತದೆ. ಉದ್ದೇಶವಿಲ್ಲದ ಕೆಲಸ ವ್ಯರ್ಥ. ಆದ್ದರಿಂದ

**ಬೀಧಿಯಲ್ಲಿ ಭೋಗಿಉರಿ ಹಾಕಿದರೆ ಪ್ರಯೋಜನವಿಲ್ಲ, ನಮ್ಮ ತಲೆಯಲ್ಲಿ ಭೋಗಗಳಿಗೆ ಕಾರಣವಾದ ಕರ್ಮಗಳನ್ನು ಜ್ಞಾನಉರಿಯಿಂದ ಉರಿಸಬೇಕು.** ಈಗಲಾದರೂ ಅದರ ಬೆಲೆ ಅರ್ಥ ತಿಳಿದು ಭೋಗಿಹಬ್ಬ ಮಾಡೋಣ. ಶರೀರದಲ್ಲಿ ಜ್ಞಾನವೆಂಬ ಅಗ್ನಿಯನ್ನು ಸಂಪಾದಿಸಿಕೊಂಡು ಕರ್ಮಗಳನ್ನು ಸುಡುತ್ತೇವೆಂಬ ಅರ್ಥದಿಂದ ಹೊರಗೆ ಭೋಗಿ ಉರಿಯನ್ನು ಹಾಕೋಣ.

# ಸಂಕ್ರಾಂತಿ

ಸಂಕ್ರಾಂತಿ ಎನ್ನುವ ಪದದಲ್ಲಿ ಎರಡು ಭಾಗಗಳ ಅರ್ಥ ಇದೆ. "ಸಂ" ಎಂದರೆ ಒಳ್ಳೆಯ ಎಂದು ಬಹಳಸಲ ಹೇಳಿಕೊಂಡಿದ್ದೇವೆ. "ಸಂ"ಸಾರ ಎಂದರೆ ಒಳ್ಳೆಯ ಸಾರ ಇರುವುದೆಂದು, "ಸಂ"ಬಂಧ ಎಂದರೆ ಒಳ್ಳೆಯ ಬಂಧವೆಂದು, "ಸಂ"ಗೀತ ಎಂದರೆ ಒಳ್ಳೆಯ ಹಾಡು ಎಂದೂ ತಿಳಿದುಕೊಂಡಿದ್ದೇವೆ. ಅದರ ಪ್ರಕಾರವೆ ಈಗ ಸಂಕ್ರಾಂತಿ ಎಂದರೆ ಒಳ್ಳೆಯ ಕ್ರಾಂತಿ ಎಂದು ಹೇಳಬಹುದು. ಕ್ರಾಂತಿ ಎಂದರೆ ಹೋರಾಟ ಎಂದು ಅರ್ಥ. ಕ್ರಾಂತಿವೀರರು ಎಂದರೆ ತಿರುಗಿಬೀಳುವ ವೀರರೆಂದು ಅರ್ಥ. ಆ ನಿಯಮದ ಪ್ರಕಾರ ಸಂಕ್ರಾಂತಿ ಎಂದರೆ ಒಳ್ಳೆಯ ಬದಲಾವಣೆ, ಒಳ್ಳೆಯ ವಿಪ್ಲವ, ಒಳ್ಳೆಯ ತಿರುವು ಹಾಗೂ ಒಳ್ಳೆಯ ಹೋರಾಟವೆಂದು ಹೇಳಬಹುದು. ಸಂಕ್ರಾಂತಿ ಒಂದು ದೊಡ್ಡಹಬ್ಬವಾಗಿದ್ದು ಇವರೇನೊ ಒಳ್ಳೆಯ ಹೋರಾಟ, ಉತ್ತಮ ಬದಲಾವಣೆ ಎನ್ನುತ್ತಿದ್ದಾರೆ ಯಾಕೆ? ಎಂದು ಕೆಲವರು ನಮ್ಮನ್ನು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಅದರ ಅರ್ಥವೂ, ಜಾರಿಗೆಯಾಗುವುದು ಎಲ್ಲವೂ ವಾಸ್ತವವೆ. ಸಂಕ್ರಾಂತಿಯಲ್ಲಿ ಒಳ್ಳೆಯ ಬದಲಾವಣೆ ಇರುವುದು ಸತ್ಯವಾದ ವಿಷಯವೆ. ಹಾಗೆಂದು ಈ ಬದಲಾವಣೆ ಹೊರಗೆ ಯಾರ ಮೇಲೆ ಮಾಡುವುದು ಅಲ್ಲ, ಸ್ವಲ್ಪ ಜನರ ಜೊತೆ ಬೆರೆತು ಮಾಡುವುದಲ್ಲ. ಹೊರಗಿನ ಬದಲಾವಣೆ ಒಳ್ಳೆಯದಾಗಬಹುದು ಅಥವಾ ಕೆಟ್ಟದ್ದಾಗಬಹುದು. ಹಾಗಲ್ಲದೆ ಎಂದಿಗೂ ಒಳ್ಳೆಯ ಬದಲಾವಣೆಯಾಗಿರುವುದು ಸಂಕ್ರಾಂತಿಯೆ! ಸಂಕ್ರಾಂತಿ

ವ್ಯಕ್ತಿಗತ ಬದಲಾವಣೆ, ಆದರೆ ಸಾಮೂಹಿಕ ಬದಲಾವಣೆ ಅಲ್ಲವೆನ್ನುತ್ತಿದ್ದೇವೆ. ಸಂಕ್ರಾಂತಿಗಿಂತ ಮೊದಲು ಭೋಗಿಉರಿಯನ್ನು ತೋರಿಸಿದವನು ದಕ್ಷಿಣಾಯಣ ಕೊನೆಯಲ್ಲಿ ವಾಂಛಗಳೆಲ್ಲವನ್ನು ಇಲ್ಲದಹಾಗೆ ಮಾಡುತ್ತಿದ್ದೇನೆಂಬ ಉದ್ದೇಶವನ್ನು ಹೊರಗೆ ಪ್ರಕಟಿಸಿದ ನಂತರ ಉತ್ತರಾಯಣ ಪ್ರಾರಂಭದಲ್ಲಿ ನಾನು ಭೋಗಿಯಾಗಿ ಅಲ್ಲದೆ ಈ ದಿನದಿಂದ ಯೋಗಿಯಾಗಿ ಇರುತ್ತೇನೆಂದು ಆ ದಿನ ಸಂಕ್ರಾಂತಿಯನ್ನು ಪ್ರಕಟಿಸುತ್ತಿದ್ದಾನೆ. ಶರೀರದಲ್ಲಿರುವ ಆಹಂ ಮೇಲಾಗಲಿ, ಮನಸ್ಸಿನ ಮೇಲಾಗಲಿ ಜೀವಾತ್ಮ ಬದಲಾವಣೆಯನ್ನು ಪ್ರಕಟಿಸುವುದನ್ನು ಒಳ್ಳೆಯ ತಿರುಗುಬಾಟೆಂದು ಸಂಕ್ರಾಂತಿ ಅನ್ನುತ್ತಿದ್ದೇವೆ. **ಮನಸ್ಸಿನ ಮೇಲೆ ತಿರುಗಿಬಿದ್ದರೆ ಬ್ರಹ್ಮಯೋಗಿಯಾಗಿ, ಆಹಂ ಮೇಲೆ ತಿರುಗಿಬಿದ್ದರೆ ಕರ್ಮಯೋಗಿಯಾಗಿ ಮನುಷ್ಯ ಬದಲಾಗುತ್ತಾನೆ.** ಇದು ವೈಯಕ್ತಿಕ ಬದಲಾವಣೆಯೆಂದು, ಅವರವರ ಶರೀರದಲ್ಲಿ ಜೀವಾತ್ಮ ಒಬ್ಬನೆ ಮಾಡುವ ಬದಲಾವಣೆಯೆಂದು ಮೊದಲೆ ಹೇಳಿಕೊಂಡಿದ್ದೇವೆ ಅಲ್ಲವೆ! ಜೀವಿಯು ತನ್ನ ಶರೀರದಲ್ಲಿ ಅಲ್ಲಿಯವರೆಗೂ ಮನಸ್ಸು ಹೇಳಿದಹಾಗೆ, ಅಹಂ ಹೇಳಿದಹಾಗೆ ಕೇಳುತ್ತಿದ್ದನು. ಆ ವಿಧವಾಗಿ ಕೇಳುವುದರಿಂದ ಪ್ರತಿಯೊಬ್ಬರೂ ಅಜ್ಞಾನಸ್ಥಿತಿಯಲ್ಲಿ ಇದ್ದಂತಾಗುತ್ತದೆ. ಅಷ್ಟೇ ಅಲ್ಲದೆ ಅಂತಹವನು ಯೋಗಿ ಅಲ್ಲವೆಂದು, ಆತನು ಭೋಗಿ ಮಾತ್ರವೆ ಆಗುತ್ತಾನೆಂದು ಹಿರಿಯರು ತಿಳಿಸಿದ್ದಾರೆ. ಎಲ್ಲಿಯವರೆಗು ಮನಸ್ಸು, ಅಹಂ ಮಾತುಗಳನ್ನು ಕೇಳುತ್ತಾ ಇರುವವನು ಒಂದೇಬಾರಿಗೆ ಕೇಳದಹಾಗೆಹೋಗುವುದು ಮನೊ, ಅಹಂಗಳನ್ನು ಬದಲಾವಣೆ ಮಾಡಿದಹಾಗೆ ಅಲ್ಲವೆ? ಮನಸ್ಸು, ಅಹಂಗಳೆರಡೂ ಅವುಗಳಮಾತನ್ನು ಕೇಳುವಹಾಗೆ ಮಾಡಿಕೊಳ್ಳಬೇಕೆಂದು ಎಷ್ಟೋ ಬಲವಾದ ಪ್ರಯತ್ನ ಮಾಡಿದರೂ, ಜೀವಿಯು ಕೇಳದಂತೆ ಹೋಗುವುದು ಅವುಗಳ ಮೇಲೆ ಹೋರಾಟ ಮಾಡಿದಹಾಗೆ ಅಲ್ಲವೆ?

ಅಹಂ ಮೇಲಾಗಲಿ, ಮನಸ್ಸಿನ ಮೇಲಾಗಲಿ ವಿರುದ್ಧವಾಗಿ ಇರುವುದೂ, ಅವುಗಳ ಮಾತು ಕೇಳದಹಾಗೆಹೋಗುವುದು ಬಹಳ ದೊಡ್ಡ ಕೆಲಸ ಮತ್ತು ಬಹಳ ಒಳ್ಳೆಯಕೆಲಸ. ಆದ್ದರಿಂದ ಅದಕ್ಕೆ **"ಸಂಕ್ರಾಂತಿ"** ಎನ್ನುವ ಹೆಸರಿಟ್ಟಿದ್ದಾರೆ.

ನೋಡಿದ್ದೀರಾ! ಸಂಕ್ರಾಂತಿ ಹೆಸರಿನಲ್ಲಿಯೆ ಎಷ್ಟು ಅರ್ಥವಿದೆಯೊ!! **ಭಗವದ್ಗೀತಾ ಶಾಸ್ತ್ರದಲ್ಲಿ ಸಾರಾಂಶವೆಲ್ಲವೂ ಯೋಗಿಯಾಗಿ ಬದಲಾಗೆಂದು ಇದೆ.** ಯೋಗಿಯನ್ನು ಎರಡು ವಿಧಗಳಾಗಿ ವಿಭಜಿಸಿ ಕರ್ಮಯೋಗಿ, ಬ್ರಹ್ಮಯೋಗಿ ಎಂದು ಗೀತೆಯಲ್ಲಿಯೆ ತಿಳಿಸಿದ್ದಾರೆ. ದೇವರ ಧರ್ಮಗಳನ್ನು ಆಚರಿಸಿದರೆ ಯಾರಾದರೂ ಯೋಗಿ ಆಗಬಲ್ಲನು. ದೇವರ ಧರ್ಮಗಳ್ಯಾವುವೂ ತಿಳಿಯದೆಹೋದರೆ, ಪ್ರಕೃತಿ ಧರ್ಮಗಳಾದ ಮನಸ್ಸಿನಮಾತು, ಅಹಂ ಮಾತು ಕೇಳಿ ಆಚರಿಸಿದರೆ ಯಾರಾದರೂ ಭೋಗಿ ಆಗುತ್ತಾನೆ. ಭೋಗಿ ಹಬ್ಬದ ದಿನ ಭೋಗಗಳನ್ನು ಬಿಡುವಹಾಗೆ ಭೋಗಿಹುರಿ ಹಾಕುವುದು, ಸಂಕ್ರಾಂತಿ ಹಬ್ಬದದಿನ ಯೋಗವನ್ನು ಆಚರಿಸುವಹಾಗೆ ಸ್ವಲ್ಪಸಮಯವಾದರೂ ಯೋಗಸಾಧನೆಯಲ್ಲಿ ಕುಳಿತು ಕೊಳ್ಳುವುದು, ಭೋಗಿ ಸಂಕ್ರಾಂತಿ ಹಬ್ಬಗಳ ದಿನ ಮಾಡಬೇಕಾದ ಮುಖ್ಯವಾದ ಆಚರಣೆ. ಪೂರ್ವದಲ್ಲಿ ಭೋಗಿ, ಸಂಕ್ರಾಂತಿಯನ್ನು **"ಜೋಡಿ"** ಹಬ್ಬಗಳಾಗಿ ಆಚರಿಸುತ್ತಿದ್ದರು. ಈ ಎರಡು ಹಬ್ಬಗಳನ್ನು ಆಧ್ಯಾತ್ಮಿಕ ಅರ್ಥದಿಂದ ಜ್ಞಾನಿಗಳು ಏರ್ಪಡಿಸಿದ್ದಾರೆ. ಆದ್ದರಿಂದ ಎಲ್ಲರೂ ಅರ್ಥವನ್ನು ತಿಳಿದು ಆಚರಿಸುತ್ತಿದ್ದರು. **ಕರ್ಮ ಅನುಭವಗಳಿಗೆ ಭೋಗಿ ಗುರುತಾಗಿ, ಕರ್ಮ ನಾಶವಾದ ಯೋಗಿಗೆ ಗುರುತಾಗಿ ಸಂಕ್ರಾಂತಿ ಪ್ರತಿ ವರ್ಷ ಪ್ರಜೆಗಳು ಮಾಡುತ್ತಿದ್ದರು.** ಭೋಗಗಳನ್ನು ಬಿಡಬೇಕೆಂದು, ಯೋಗಗಳನ್ನು ಅಳವಡಿಸಿಕೊ ಎಂದು ಆದಿನದ ಸ್ವಾಮೀಜಿಗಳು, ಮಹರ್ಷಿಗಳು, ಬೋಧಕರು ಹೇಳುತ್ತಿದ್ದರು. ಕುಟುಂಬದಲ್ಲಿ ಹೊಸದಾಗಿ ಹುಟ್ಟಿದ ಮಕ್ಕಳಿಗೆ ಸ್ವಲ್ಪ ವಯಸ್ಸು ಬರುತ್ತಲೇ ಭೋಗಿ, ಸಂಕ್ರಾಂತಿ ಹಬ್ಬಗಳ ವಿವರವನ್ನು ತಿಳಿಸಿ ಅವರನ್ನು ಸಕ್ರಮಮಾರ್ಗದಲ್ಲಿ ನಡೆಯುವಹಾಗೆ ಮಾಡುತ್ತಿದ್ದರು. ಈ ವಿಧವಾಗಿ ಈ ಹಬ್ಬಗಳಿಂದ ಪ್ರಜೆಗಳು ಸ್ವಲ್ಪ ಜ್ಞಾನವನ್ನು ತಿಳಿದು ಬದುಕುತ್ತಿದ್ದರು. ಯಾರಲ್ಲಾದರೂ ಅಜ್ಞಾನ ಬೆಳೆಯುವುದಕ್ಕೆ ಮೊದಲಾದರೂ ಹಬ್ಬದ ಸಮಯದಲ್ಲಿ ಅರ್ಥಸಹಿತವಾಗಿ ನಡೆದುಕೊಳ್ಳುವುದರಿಂದ ಅವರಲ್ಲಿರುವ ಆ ಸ್ವಲ್ಪ ಅಜ್ಞಾನ ಹೋಗುತ್ತಿತ್ತು. ಆದ್ದರಿಂದ ಎಲ್ಲರೂ ಶಾಂತಿಯಾಗಿ ಜ್ಞಾನಯುತವಾಗಿ ಬದುಕುತ್ತಿದ್ದರು.

ಈ ದಿನ ಜೋಡಿಹಬ್ಬಗಳಾದ ಭೋಗಿ, ಸಂಕ್ರಾಂತಿ ಎರಡು ಹಬ್ಬಗಳು ಇದ್ದರೂ, ಪೂರ್ವಕಾಲವಿರುವ ಅರ್ಥಪೂರ್ಣ ಆಚರಣೆಗಳು ಇಂದು ಬಹಳ ವಿರಳವಾಗಿ ಹೋಗಿವೆ. ಭೋಗಿ ಎಂದರೂ, ಸಂಕ್ರಾಂತಿ ಎಂದರೂ ಅರ್ಥ ತಿಳಿಯದ ಹಿಂದೂ ಸಮಾಜ ತಯಾರಾಗಿದೆ. ಇದು ಸಾಮಾನ್ಯಮನುಷ್ಯನಿಗಷ್ಟೆ ಅಲ್ಲದೆ ಹಿಂದೂಮತದಲ್ಲಿ ನಾವು ಹಿರಿಯರೆನಿಕೊಂಡವರಿಗೂ ಸಹ ಸಂಕ್ರಾಂತಿ ಅರ್ಥ ತಿಳಿಯದು. ಈದಿನ ಅರ್ಥ ತಿಳಿಯದೆಹೋದರೂ, ಆಚರಣೆ ಸ್ವಲ್ಪವಾದರೂ ನಮ್ಮ ಮಧ್ಯದಲ್ಲಿ ಉಳಿದಿದೆ. ಭೋಗಿ ದಿನ ರಾತ್ರಿಗೆ ಭೋಗಿಉರಿ ಹಾಕುವವರು ಕೆಲವು ಪ್ರಾಂತಗಳಲ್ಲಿ ಇದ್ದಾರೆ. ಭೋಗಿ ಉರಿಯ ಆಚರಣೆಯನ್ನು ಮಾಡುತ್ತಿದ್ದಾರೆ, ಆದರೆ ಉರಿಯಾಕುವುದರ ಹಿಂದೆ ಪೂರ್ವದಲ್ಲಿನ ಭಾವಾರ್ಥ ಇಂದು ಯಾರ ಹತ್ತಿರ ಇಲ್ಲದ್ದರಿಂದ ಉರಿಯ ಮುಂದೆ ಮತ್ತುಪಾನೀಯಗಳನ್ನು ಕುಡಿದು ಕುಪ್ಪಳಿಸುತ್ತಿದ್ದಾರೆ. ಭೋಗಗಳು ಬಿಡಬೇಕಾದ ಆ ಸಮಯದಲ್ಲಿ ಸಲಿಗೆಗೆ ಕುಡಿಯುತ್ತಾ, ತಿನ್ನುತ್ತಾ ಕಾಲವನ್ನು ಕಳೆಯುತ್ತಿದ್ದಾರೆ. ಮರುದಿನವಾದ ಸಂಕ್ರಾಂತಿದಿನ ಆ ಹೆಸರಿಗೆ ತಕ್ಕಂತೆ ಒಂದು ನಿಮಿಷವೂ ಕೂಡಾ ಮನಸ್ಸನ್ನು ನಿಲ್ಲಿಸುವವರಾಗಲಿ, ಅಹಂನ್ನು ಅಡಗಿಸುವವರಾಗಲಿ ಕಾಣಿಸುತ್ತಿಲ್ಲ. ಸಂಕ್ರಾಂತಿ ಎಂದರೆ ಹೆಂಗಸರ ರಂಗೋಲೆ ಹಬ್ಬವಾಗಿ ತಿಳಿದು ಪ್ರತಿಯೊಂದು ಮನೆಯ ಮುಂದೆ ರಂಗೋಲೆ ಹಾಕುತ್ತಿದ್ದಾರೆ. ಸಂಕ್ರಾಂತಿ ದಿನವೂ ಸಹ ಮನೊ, ಅಹಂಗಳ ಮೇಲೆ ಯಾವಮಾತ್ರ **"ಕ್ರಾಂತಿ"** ಇಲ್ಲದಂತೆ ಬಣ್ಣದರಂಗೋಲೆ ಹಾಕಿ, ಬಣ್ಣದ ಬಟ್ಟೆಗಳು ಧರಿಸಿ ವಿನೋದದಲ್ಲಿಯೇ ಕಳೆಯುತ್ತಿದ್ದಾರೆ. ಇದೆಲ್ಲವೂ ನೋಡಿದರೆ, ಪೂರ್ವದಲ್ಲಿ ಹಿರಿಯರು ಇಟ್ಟಿರುವ ಭಾವ ಸ್ವಲ್ಪವಾದರೂ ಇಲ್ಲದಂತೆ ಹೋಗಿದೆಂದು ತಿಳಿಯುತ್ತಿದೆ. ಈಗ ನಾವು ತಿಳಿಸಿದ ಈ ವಿಧಾನವೆಲ್ಲವೂ ಓದಿದವರು ಸ್ವಲ್ಪಕ್ಕೆ ಸ್ವಲ್ಪವಾದರೂ ಬದಲಾಗುತ್ತಾರೆಂದು ತಿಳಿಯುತ್ತಿದ್ದೇವೆ. ಇದೆಲ್ಲವೂ ಓದಿದ ನಂತರ ನೀವು ಬದಲಾಗದಿದ್ದರೂ ಪರವಾಗಿಲ್ಲ, ಆದರೆ ನಮ್ಮನ್ನು ವಿಮರ್ಶಿಸಿ, ದೂಷಿಸಿ ನಾವೇ ನಿಜವಾದ ಹಿಂದೂಗಳು, ನೀನು ಪರಮತಸ್ಥನು, ಪರಮತ ಬೋಧನೆ ಮಾಡುತ್ತಿದ್ದೀಯಾ ಎಂದು ಮಾತ್ರ ಹೇಳಬೇಡಿ. ನಾವು ಹೇಳುವುದು ಆಧ್ಯಾತ್ಮಿಕ ಅರ್ಥದಿಂದ ಕೂಡಿಕೊಂಡಿರುತ್ತದೆ.

ಕೆಲವರಿಗೆ ಸುಲಭವಾಗಿ ಅರ್ಥವಾಗದಿರಬಹುದು. ಅಷ್ಟುಮಾತ್ರಕ್ಕೆ ನಮ್ಮನ್ನು ದೂಷಿಸಬೇಡಿ.

# ದಶರಾ

ದಶರಾ ಎಂಬ ಪದ ಮೊದಲು **"ದಶರ"** ಎಂಬ ಪದವಾಗಿ ಇರುತ್ತಿತ್ತು. ಪ್ರಸ್ತುತಕಾಲದಲ್ಲಿ ದಶಕ್ಕೆ ಪಕ್ಕದಲ್ಲಿ ದೀರ್ಘ **"ರಾ"** ಇದೆ. ಪೂರ್ವಕಾಲದಲ್ಲಿ ದಶಕ್ಕೆ ಪಕ್ಕದಲ್ಲಿ ದೀರ್ಘ ಹೊಂದಿದ **"ರಾ"** ಅಲ್ಲದೆ ಕೇವಲ ದೀರ್ಘವಿಲ್ಲದ **"ರ"** ಮಾತ್ರ ಇರುತ್ತಿತ್ತು. ಆದ್ದರಿಂದ ಪೂರ್ವದಲ್ಲಿದ್ದ **"ದಶರ"** ಎಂಬ ಪದ ಈಗ **"ದಶರಾ"** ಎಂದು ಹೇಳಲಾಗುತ್ತಿದೆಯೆಂದು ತಿಳಿಯಬೇಕು. ಈದಿನ ಇರುವ ಹಬ್ಬಗಳೆಲ್ಲವೂ ಪೂರ್ವದಲ್ಲಿ ಬ್ರಹ್ಮಜ್ಞಾನಿಗಳು ಉದ್ದೇಶ ಪೂರ್ವಕವಾಗಿ ಇಟ್ಟಿರುವವೆ ಎಂದು ತಿಳಿದುಕೊಂಡಿದ್ದೇವೆ. ಆದ್ದರಿಂದಲೇ ಅವು ಎಲ್ಲವೂ ಆಧ್ಯಾತ್ಮಿಕ ಅರ್ಥದಿಂದಲೇ ಕೂಡಿಕೊಂಡಿರುತ್ತವೆ. ಈಗ ನಾವು ಸಹ ಅವರು ನಿರ್ಣಯಿಸಿದ ಅರ್ಥದಿಂದಲೇ ವಿವರಿಸಿಕೊಳ್ಳಬೇಕಾಗಿದೆ. ಪೂರ್ವದಲ್ಲಿ "ದಶರ" ಎಂಬ ಹೆಸರು ಕೆಲ ಕಾಲದ ನಂತರ "ದಶರಾ" ಆಗಿ ಬದಲಾಗಿದೆ. ನಂತರ ಸ್ವಲ್ಪ ಕಾಲಕ್ಕೆ ಆಧ್ಯಾತ್ಮಿಕತೆ ತಿಳಿಯದಂತೆ ಹೋಗಿ ಕೆಲವು ಪುರಾಣಗಳ ಕಲ್ಪನೆಯಿಂದ "ವಿಜಯದಶಮಿ" ಆಗಿದೆ. ಈ ವಿಧವಾಗಿ ದಶರ ವಿಜಯದಶಮಿ ಆಗಿದೆ. ಹಾಗೆ ಬದಲಾಗಿಹೋಗುವುದರಿಂದ ಹಿರಿಯರು ನಿರ್ಣಯಿಸಿದ ದಶರ ಭಾವಕ್ಕೆ ವಿಜಯದಶಮಿ ಅರ್ಥ ಪೂರ್ತಿ ವಿರುದ್ಧವಾಗಿಹೋಗಿದೆ. ಪೂರ್ವದಲ್ಲಿ ದಶರ ಎನ್ನುವ ಪದಕ್ಕೆ ಆಧ್ಯಾತ್ಮಿಕ ಅರ್ಥ ಒಂದೇ ರೀತಿ ಇರುತ್ತಿತ್ತು. ನಂತರ ದಶರಾಗೂ ಸಹ ಸರಾಸರಿ ಅದೇ ಅರ್ಥ ಇರುತ್ತಿತ್ತು. ಆದರೆ ವಿಜಯದಶಮಿ ಎನ್ನುವ ಹೆಸರಿಗೆ ಪೂರ್ತಿ ಭಾವ ಬದಲಾಗಿಹೋಗಿದೆ.

'ಶತ' ಎಂದರೆ ನೂರು ಎಂದೂ, 'ದಶ' ಎಂದರೆ ಹತ್ತು ಎಂದೂ ಎಲ್ಲರಿಗೂ ತಿಳಿದಿದೆ. ಇಲ್ಲಿ ದಶರದಲ್ಲಿ "ರ" ಎಂದರೆ ನಾಶ ಎಂದು ಅರ್ಥ ಇದೆ. ಮಂತ್ರ ಉಚ್ಚಾಟನೆಯಲ್ಲಿ ಸಹ "ರಂ" ಎನ್ನುವ ಅಕ್ಷರವನ್ನು ನಾಶಕ್ಕೆ

ಬದುಲು ಬೀಜಾಕ್ಷರವಾಗಿ ಬಳಸುತ್ತಾರೆ. “ಹರ” ಎನ್ನುವ ಪದವೊಂದರ ಅರ್ಥ ನಾಶ ಮಾಡುವವನೆಂದು ಅರ್ಥ. ಅದರಲ್ಲಿ ‘ರ’ ಎಂದರೆ ನಾಶ ಎಂದು, ‘ಹ’ ಎಂದರೆ ಮಾಡುವವನೆಂದೂ ಹರ ಎಂದರೆ ನಾಶ ಮಾಡುವವನೆಂದು ಸಹ ಹೇಳಬಹುದು. ‘ರಿ’ ಎಂದರೆ ಪಾಲನೆ ಎಂದೂ, ‘ಹರಿ’ ಅಂದರೆ ಪಾಲನೆ ಮಾಡುವವನೆಂದು ಅರ್ಥ ಇದೆ. ಇಲ್ಲಿ ಒಂದು ‘ರ’ ವಿಷಯಕ್ಕೆ ಬಂದರೆ ಅದರೊಂದರ ಅರ್ಥದ ಪ್ರಕಾರ ಇಲ್ಲದಹಾಗೆ ಮಾಡುವುದು, ಕೃಶಿಸುವಂತೆ ಮಾಡುವುದು, ನಾಶ ಮಾಡುವುದೆಂದು ಹೇಳಬಹುದು. ದಶರದಲ್ಲಿ ‘ರ’ಗೆ ಅನುಸಂಧಾನವಾಗಿ ದಶ ಎಂದು ಇದೆ. ದಶ ಅಂದರೆ ಹತ್ತು ಎಂದು ಅರ್ಥ ಅಲ್ಲವೆ! ಅದರ ಪ್ರಕಾರ ಹತ್ತನ್ನು ನಾಶ ಮಾಡುವುದು ದಶರ ಎಂದು ಅರ್ಥವಾಗುತ್ತಿದೆ. ಅರ್ಥವೆಲ್ಲಾ ಚೆನ್ನಾಗಿಯೆ ಇದೆಯಾಗಲಿ ಹತ್ತು ಏನು? ನಾಶವೇನು? ಎಂಬ ಪ್ರಶ್ನೆ ಯಾರಿಗಾದರೂ ಬರುತ್ತದೆ. ಆ ಪ್ರಶ್ನೆಗೆ ಉತ್ತರ ಏನೆಂದರೆ! ನಾವು ಹಬ್ಬಗಳಿಗೆಲ್ಲಾ ಆಧ್ಯಾತ್ಮಿಕ ಉತ್ತರವನ್ನೆ ಹುಡುಕಬೇಕೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅದರಪ್ರಕಾರ ವಿವರಿಸಿಕೊಳ್ಳಬೇಕಾಗಿದೆ. ಇಲ್ಲಿ ಇನ್ನೂ ಕೆಲವರಿಗೆ ಆಧ್ಯಾತ್ಮಿಕ ಎಂದರೆ ಏನು? ಎಂಬ ಪ್ರಶ್ನೆ ಸಹ ಇರಬಹುದು. ಅದಕ್ಕೂ ಸಹ ಸ್ವಲ್ಪ ವಿವರಣೆ ಹೇಳಿಕೊಳ್ಳೋಣ. ಆತ್ಮವನ್ನು ಕುರಿತು ತಿಳಿದು ಕೊಳ್ಳುವುದನ್ನು ಆಧ್ಯಾತ್ಮಿಕವೆನ್ನಬಹುದು. ಇನ್ನೂ ವಿವರವಾಗಿ ಹೇಳಿಕೊಂಡರೆ ಆತ್ಮವನ್ನು ಕುರಿತು ಅಧ್ಯಯನ ಮಾಡುವುದನ್ನು ಆಧ್ಯಾತ್ಮಿಕ ಎನ್ನುತ್ತೇವೆ. ಆತ್ಮ ಎನ್ನುವುದು ಶರೀರದೊಳಗೆ ಜೀವಾತ್ಮದ ಜೊತೆ ನಿವಾಸಿಸುತ್ತಿದೆ. ಆದ್ದರಿಂದ ಶರೀರದಲ್ಲಿಯೇ ಆಧ್ಯಾತ್ಮಿಕ ಇದೆ. ಕಳ್ಳರಿದ್ದರೆ ಪೊಲೀಸರಿರುತ್ತಾರೆ. ಹಾಗೆಯೇ ಪೊಲೀಸರಿದ್ದರೆ ಕಳ್ಳರಿದ್ದಾರೆಂದು ತಿಳಿದಹಾಗೆ, ಆತ್ಮ ಇದ್ದರೆ ಜೀವಾತ್ಮ ಇರುತ್ತದೆ, ಜೀವಾತ್ಮ ಇದ್ದರೆ ಆತ್ಮ ಇರುತ್ತದೆ. ಯಾವ ವಿಧವಾಗಿ ಪೊಲೀಸರಿಗೂ ಕಳ್ಳರಿಗೂ ಅವಿನಾಭಾವ ಸಂಬಂಧವಿದೆಯೋ, ಅದೇ ರೀತಿ ಆತ್ಮಕ್ಕು ಜೀವಾತ್ಮಕ್ಕು ಸಂಬಂಧವಿದೆ. ಆದ್ದರಿಂದ ಆತ್ಮವನ್ನು ಜೀವಾತ್ಮವನ್ನು ಜೋಡಿ ಆತ್ಮಗಳೆಂದು ಕರೆಯುತ್ತಿದ್ದೇವೆ. ಜೋಡಿ ಆತ್ಮಗಳಿರುವ ಶರೀರಕ್ಕೆ ಹೊರಗೆ ಹತ್ತು ಶರೀರ ಭಾಗಗಳಿವೆ. ಅವುಗಳನ್ನೇ ದಶೇಂದ್ರಿಯಗಳೆನ್ನುತ್ತಿದ್ದೇವೆ. ಅವುಗಳನ್ನು

ವಿವರಿಸಿಕೊಂಡು ನೋಡಿದರೆ ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳೆಂದು ವಿಭಜಿಸಿಕೊಂಡು ಹೇಳಬಹುದು. ಕರ್ಮೇಂದ್ರಿಯಗಳು ಐದು ಕ್ರಮವಾಗಿ 1) ಕಾಲುಗಳು 2) ಕೈಗಳು 3) ಬಾಯಿ 4) ಗುದ 5) ಗುಹ್ಯ ಎಂದು ಹೇಳಬಹುದು. ಹಾಗೆಯೇ ಜ್ಞಾನೇಂದ್ರಿಯಗಳು ಐದು ಕ್ರಮವಾಗಿ 1) ಕಣ್ಣು 2) ಕಿವಿ 3) ಮೂಗು 4) ನಾಲಿಗೆ 5) ಚರ್ಮ ಎಂದು ಹೇಳಬಹುದು. ಕರ್ಮ, ಜ್ಞಾನೇಂದ್ರಿಯಗಳು ಒಟ್ಟು ಹತ್ತು ಅಲ್ಲವೆ! ಈ ಹತ್ತನ್ನೇ "ರ" ಮಾಡೆಂದಿದ್ದಾನೆ, ಎಂದರೆ ನಾಶ ಮಾಡೆಂದು ಹೇಳುವುದನ್ನೆ "ದಶರ" ಎಂದು ಹೇಳಬಹುದು. ಈಗ ತಕ್ಷಣ ಒಂದು ಪ್ರಶ್ನೆ ಯಾರಿಗಾದರೂ ಬರಬಹುದು. ಅದೇನೆಂದರೆ! ಹತ್ತನ್ನು ನಾಶ ಮಾಡೆಂದರೆ ಕಣ್ಣನ್ನು ಇರಿದು ಹಾಕಬೇಕಾ? ಕಿವಿಯನ್ನು ಕೊಯ್ದುಹಾಕಬೇಕಾ? ನಾಲಿಗೆಯನ್ನು ಕೊಯ್ದುಹಾಕಬೇಕಾ? ಮೂಗನ್ನು ಕತ್ತರಿಸಬೇಕಾ? ಚರ್ಮವನ್ನು ಕಿತ್ತಾಕಬೇಕಾ? ಹಾಗೆಯೇ ಕಾಲು, ಕೈಗಳನ್ನು ಕತ್ತರಿಸಬೇಕಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಕಣ್ಣು ಮುಂತಾದ ಜ್ಞಾನೇಂದ್ರಿಯಗಳನ್ನಾಗಲಿ, ಕಾಲು ಮುಂತಾದ ಕರ್ಮೇಂದ್ರಿಯಗಳನ್ನಾಗಲಿ ಇರಿದುಹಾಕೆಂದು, ಕತ್ತರಿಸಿಹಾಕೆಂದು ಯಾರೂ ಹೇಳಲಿಲ್ಲ. ಅವುಗಳನ್ನು ಇಲ್ಲದಹಾಗೆ ಮಾಡೆಂದರೆ ಅವುಗಳ ಕೆಲಸವನ್ನು ಇಲ್ಲದಹಾಗೆ ಮಾಡೆಂದು ಅರ್ಥ. ಅವುಗಳ ಕೆಲಸವನ್ನು ಇಲ್ಲದಹಾಗೆ ಮಾಡಿದರೆ ಅವು ಇದ್ದರೂ ಇಲ್ಲದಂತೆ ಆಗುತ್ತದೆ. ಇದನ್ನು ಕುರಿತು ಸಣ್ಣ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಂದು ಮನೆಯಲ್ಲಿ ವಿದ್ಯುತ್ ಬಲ್ಬುಗಳು ಚಿಕ್ಕವು, ದೊಡ್ಡವು ಒಟ್ಟು ಹತ್ತು ಇವೆಯೆಂದುಕೊಳ್ಳೋಣ. ಅವು ಹಗಲುಹೊತ್ತು ಬೆಳಗಬೇಕಾದ ಕೆಲಸವಿಲ್ಲ, ರಾತ್ರಿಸಮಯ ಹತ್ತು ಬಲ್ಬುಗಳು ಬೆಳಗುತ್ತಿರುತ್ತವೆ. ಅದು ಎಲ್ಲರ ಮನೆಯಲ್ಲಿಯೂ ಸಹಜವಾಗಿ ಇರುವ ವಿಧಾನ. ಆದರೆ ಒಂದು ಮನೆ ಯಜಮಾನನಿಗೆ ರಾತ್ರಿ ಸಮಯದಲ್ಲಿ ಬೆಳಕಿನ ಅವಶ್ಯಕತೆ ಇರುವುದಿಲ್ಲ. ಆಗ ಆತನು ಬಲ್ಬುಗಳ ಕೆಲಸವನ್ನು ಇಲ್ಲದ ಹಾಗೆ ಮಾಡುತ್ತಾನಾ? ಬಲ್ಬುಗಳನ್ನು,

ವೈರನ್ನು ಕಿತ್ತು ಇಲ್ಲದಂತೆ ಮಾಡುತ್ತಾನಾ? ಕೀಳದಹಾಗೆ ಅವುಗಳ ಕೆಲಸವನ್ನು ನಿಲ್ಲಿಸಿ ಬೆಳಕನ್ನು ಇಲ್ಲದಂತೆ ಮಾಡುತ್ತಾನೆ. ಮನೆಯೆಲ್ಲ ಕತ್ತಲಾಗಿ, ಬೆಳಕು ಸ್ವಲ್ಪವೂ ಇರಬಾರದೆಂದುಕೊಂಡರೆ ಹತ್ತು ಬಲ್ಬುಗಳ ಸ್ವಿಚ್ ಆಪ್‌ಮಾಡಿ ಅವುಗಳ ಕೆಲಸವನ್ನು ಇಲ್ಲದಂತೆ ಮಾಡುತ್ತಾನೆ. ಇದು ಮೊದಲ ವಿಧಾನವಾದರೆ, ಎರಡನೆ ವಿಧಾನ ಇನ್ನೊಂದು ಇದೆ. ಅದು ಏನೆಂದರೆ! ಮನೆಯಲ್ಲಿನ ಬಲ್ಬುಗಳೆಲ್ಲ ಬೆಳಗುತ್ತಿದ್ದರೂ, ತಾನು ಕಣ್ಣನ್ನು ಗಟ್ಟಿಯಾಗಿ ಮುಚ್ಚಿಕೊಂಡರೆ ಬೆಳಕು ಸ್ವಲ್ಪವೂ ಕಾಣಿಸುವುದಿಲ್ಲ ತಾನೆ! ಈ ವಿಧವಾಗಿ ಸಹ ಬೆಳಕು ತನಗೆ ತಿಳಿಯದಹಾಗೆ ಮಾಡಿಕೊಳ್ಳಬಹುದು. ಇಲ್ಲಿ ಒಂದು ವಿಧಾನದ ಪ್ರಕಾರ ಬೆಳಕು ಇಲ್ಲದಹಾಗೆ ಮಾಡಿಕೊಳ್ಳುವುದಕ್ಕೆ ಬಲ್ಬುಗಳ ಕೆಲಸವನ್ನು ಇಲ್ಲದಹಾಗೆ ಮಾಡುತ್ತಿದ್ದೇವೆ, ಆದರೆ ಬಲ್ಬುಗಳನ್ನು ಇಲ್ಲದಹಾಗೆ ಮಾಡುತ್ತಿಲ್ಲ. ಹಾಗೆಯೇ ಮತ್ತೊಂದು ವಿಧಾನದಲ್ಲಿ ಬಲ್ಬುಗಳ ಕೆಲಸ ಮಾಡುತ್ತಿದ್ದರೂ ತಾನೇ ಸ್ವತಹ ನೋಡದಂತೆ, ಬೆಳಕನ್ನು ಇಲ್ಲದಹಾಗೆ ಮಾಡಿಕೊಳ್ಳುತ್ತಿದ್ದಾನೆ. ಆದರೆ ಆಗಲೂ ಸಹ ಬಲ್ಬುಗಳನ್ನು ಕಿತ್ತುಹಾಕುವುದಾಗಲಿ, ಒಡೆದಾಕುವುದಾಗಲಿ ಮಾಡಲಿಲ್ಲ ತಾನೆ! ಇಲ್ಲಿ ಕೆಲವರೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಬೆಳಕನ್ನು ಇಲ್ಲದಹಾಗೆ ಮಾಡಿಕೊಳ್ಳುವುದಕ್ಕೆ ಮತ್ತೊಂದು ವಿಧಾನವಾಗಿ ಬಲ್ಬುಗಳನ್ನೆಲ್ಲವನ್ನು ಒಡೆದುಹಾಕಬಹುದಲ್ಲವೆ! ಹಾಗೆ ಸಹ ಬೆಳಕು ಇಲ್ಲದಹಾಗೆ ಹೋಗುತ್ತದೆ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಮನೆ ಯಜಮಾನ ರಾತ್ರಿ ಸಮಯ ಏನು ಮಾಡದೆ ಸುಮ್ಮನಿರಬೇಕೆಂದುಕೊಂಡಾಗ, ಬೆಳಕಿನಿಂದ ಕೆಲಸವಿಲ್ಲದಿರುವಾಗ ಒಂದು ವಿಧವಾಗಿ ಬಲ್ಬುಗಳನ್ನು ಕೆಲಸ ಮಾಡದಂತೆ ಸ್ವಿಚ್ ಆಪ್‌ಮಾಡಬಹುದು. ಮತ್ತೊಂದು ವಿಧವಾಗಿ ಕಣ್ಣುಗಳನ್ನು ಮುಚ್ಚಿಕೊಳ್ಳಬಹುದು ಎಂದು ತಿಳಿದುಕೊಂಡಿದ್ದೇವೆ ತಾನೆ! ಬಲ್ಬುಗಳನ್ನು ಮಾತ್ರ ಹೊಡೆಯುವುದಿಲ್ಲವೆಂದು ಸಹ ಹೇಳಿಕೊಂಡಿದ್ದೇವೆ. ಏಕೆ ಹಾಗೆ ಒಡೆಯಲಿಲ್ಲ ವೆಂದರೆ! ರಾತ್ರಿಸಮಯ ಬೆಳಕಿನ ಅಗತ್ಯ ಬೇಡವೆಂದುಕೊಂಡ ಯಜಮಾನ ಆಗಾಗ ರಾತ್ರಿಸಮಯ ಸಹ ಕೆಲಸ ಮಾಡಬೇಕಾಗಿ ಬರುತ್ತಿದೆ. ಅಂತಹ ಸಮಯದಲ್ಲಿ ಬೆಳಕು ಅಗತ್ಯ. ಬೆಳಕು ಅಗತ್ಯವಾದಾಗ ಬೆಳಗುವ ಪರಿಕರಗಳಾದ

ಬಲ್ಬುಗಳು ತಪ್ಪದೆ ಇರಬೇಕಲ್ಲವೆ! ಆದ್ದರಿಂದ ವಿದ್ಯುತ್ ವೈರ್‌ಗಳನ್ನು, ಬಲ್ಬುಗಳನ್ನು ಕಿತ್ತುಹಾಕಲಿಲ್ಲ, ಒಡೆದುಹಾಕಲಿಲ್ಲವೆಂದು ತಿಳಿಯ ಬೇಕು.

ಅದೇ ವಿಧವಾಗಿಯೇ ಶರೀರವೆಂಬ ಮನೆಯಲ್ಲಿ ಕೆಲಸ ಮಾಡುವ ಹೊರಗಿನ ಅವಯವಗಳು ಹತ್ತು ಇವೆ. ವಿದ್ಯುತ್ ಬಲ್ಬುಗಳಿಗೆ ಹಗಲುವೊತ್ತು ಕೆಲಸವಿಲ್ಲದಹಾಗೆ ಹತ್ತು ಅವಯವಗಳಿಗೂ ಸಹ ರಾತ್ರಿ ಸಮಯ ಕೆಲಸವಿಲ್ಲ. ರಾತ್ರಿ ಸಮಯ ಬಲ್ಬುಗಳಿಗೆ ಕೆಲಸ ವಿದ್ದಂತೆ, ಹಗಲು ಮಾತ್ರ ಹತ್ತು ಅವಯವ ಗಳಿಗೂ ಕೆಲಸವಿದೆ. ಶರೀರದಲ್ಲಿರುವ ಜೀವಿಗೆ ಹತ್ತು ಅವಯವಗಳ ಕೆಲಸ ಅವಶ್ಯಕತೆಯಿಲ್ಲ ಅಂದುಕೊಂಡರೆ ಒಂದು ವಿಧಾನದ ಪ್ರಕಾರ ಮನೆಯಲ್ಲಿ ಲೈಟ್‌ಗಳ ಕೆಲಸವನ್ನು ನಿಲ್ಲಿಸಿದಂತೆ ಅವಯವಗಳ ಕೆಲಸವನ್ನು ನಿಲ್ಲಿಸಬಹುದು. ಎರಡನೆ ವಿಧಾನದ ಪ್ರಕಾರ ಬೆಳಕನ್ನು ಬೇಡೆವೆಂದುಕೊಂಡವನು ಕಣ್ಣನ್ನು ಮುಚ್ಚಿಕೊಂಡಂತೆ, ಹತ್ತು ಅವಯವಗಳು ಕೆಲಸ ಮಾಡುತ್ತಿದ್ದರೂ ಜೀವಿಯು ಅವಯವಗಳ ಕೆಲಸವೊಂದರ ಫಲಿತದ ಮೇಲೆ ಧ್ಯಾಸವಿಲ್ಲದೆ ಇರಬೇಕು. ಹತ್ತು ಬಲ್ಬಗಳು ಬೆಳಗುತ್ತಿದ್ದರೂ ಕಣ್ಣನ್ನು ಮುಚ್ಚುಕೊಂಡವನಿಗೆ ಬಲ್ಬುಗಳ ಬೆಳಕು ತಿಳಿಯದಹಾಗೆ, ಹತ್ತು ಅವಯವಗಳು ಕೆಲಸ ಮಾಡುತ್ತಿದ್ದರೂ ಅವುಗಳ ಮೇಲೆ ಧ್ಯಾಸವಿಲ್ಲದವನಿಗೆ ಅವಯವಗಳ ಕೆಲಸವೊಂದರ ಫಲಿತಕರ್ಮ ಜೀವಿಗೆ ಅಂಟದು. ಈ ವಿಧವಾಗಿ ಎರಡು ಪದ್ಧತಿಗಳ ಪ್ರಕಾರ ಜೀವಿಯು ಹತ್ತು ಅವಯವಗಳ ಅವಶ್ಯಕತೆ ಇಲ್ಲದಹಾಗೆ ಮಾಡಿಕೊಳ್ಳಬಹುದು. ಅಷ್ಟೇಯಾಗಲಿ ಹತ್ತು ಅವಯವಗಳನ್ನು ತಿವಿದುಹಾಕುವುದು, ಕತ್ತರಿಸಿಹಾಕುವುದು ಅಗತ್ಯವಿಲ್ಲ. ಅಗತ್ಯವಾದಾಗ ಆಗಾಗ ಶರೀರ ಅವಯವಗಳಜೊತೆ ಜೀವಿಯು ಕೆಲಸ ಮಾಡಬೇಕಾಗಿ ಬರುತ್ತದೆ. ಆದ್ದರಿಂದ ಅವಯವಗಳು ಶರೀರಕ್ಕೆ ಇರಬೇ ಕಾಗಿರುವವೆ.

ಒಂದು ವಿಧಾನದ ಪ್ರಕಾರ ಹತ್ತು ಅವಯವಗಳ ಕೆಲಸವನ್ನು ನಿಲ್ಲಿಸುವುದನ್ನು ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ **ಬ್ರಹ್ಮಯೋಗ** ಎಂದು ಹೇಳಿದ್ದಾರೆ. ಎರಡನೆ ವಿಧಾನದ ಪ್ರಕಾರ ಹತ್ತು ಅವಯವಗಳು ಕೆಲಸ

ಮಾಡುತ್ತಿರುವಾಗ ಜೀವಿಯು ಅವುಗಳ ಸಂಬಂಧವಿಲ್ಲದೆ ಫಲಿತದ ಮೇಲೆ ಧ್ಯಾಸವಿಲ್ಲದೆ ಇರುವುದನ್ನು ಭಗವದ್ಗೀತೆಯಲ್ಲಿಯೇ **ಕರ್ಮಯೋಗ** ಎಂದಿದ್ದಾರೆ. ಈ ಎರಡು ಯೋಗಗಳಲ್ಲಿ ಹತ್ತು ಅವಯವಗಳ ಸಂಬಂಧವನ್ನು ಇಲ್ಲದಹಾಗೆ ಮಾಡಿಕೊಳ್ಳುವುದು ಎರಡು ವಿಧಾನಗಳಾಗಿಯೇ ಇವೆ. ಆದ್ದರಿಂದ ಹತ್ತರ ಫಲಿತವನ್ನು ಇಲ್ಲದಹಾಗೆ ಮಾಡಿಕೊಳ್ಳಿ ಎಂದು ತಿಳಿಸುವ ಯೋಗ ಸಾರಾಂಶವನ್ನು **"ದಶರ"** ಎನ್ನುವ ಹಬ್ಬದ ರೂಪದಲ್ಲಿ ಹಿರಿಯರು ಇಟ್ಟಿದ್ದಾರೆ. ದಶರ ಎಂದರೆ ಹತ್ತನ್ನು ಇಲ್ಲದಹಾಗೆ ಮಾಡಿಕೊಳ್ಳಿ ಎಂದಲ್ಲವೆ ಅರ್ಥ. ಪೂರ್ವದಲ್ಲಿ ಈ ವಿಧವಾಗಿ ಅರ್ಥವನ್ನು ತಿಳಿಸಿ ಹಬ್ಬವನ್ನು ಇಟ್ಟಿದ್ದಾರೆ. ಕಾಲಕ್ರಮೇಣ ಅಜ್ಞಾನ ಬೆಳೆದುಹೋಗಿ ಧರ್ಮಗಳು ಅಧರ್ಮಗಳಾಗಿ ಬದಲಾಗಿಹೋಗಿವೆ. ಆದ್ದರಿಂದ ಈದಿನ "ದಶರ"ಗೆ ಅರ್ಥ ತಿಳಿಯದಹಾಗೆ ಹೋಗಿದೆ. ಬ್ರಹ್ಮ, ಕರ್ಮಯೋಗಗಳಿಗೆ ಪ್ರತೀಕವಾಗಿ ದಶರ ಇದೆಯೆಂದೂ, ಹಿರಿಯರು ದಶರಾ ಎಂಬ ಹೆಸರು ಇಡುವುದರಲ್ಲಿ ಅಂತರಾರ್ಥ ಯೋಗಗಳ ಸೂಚನೆಯೆಂದೂ, ಈಗಿನ ಕಾಲದಲ್ಲಿ ಯಾರಿಗೂ ತಿಳಿಯದಹಾಗೆ ಹೋಗಿದೆ. ಒಂದುವೇಳೆ **'ರ'** ಗೆ ಅರ್ಥ ತಿಳಿಯದೆಹೋದರೂ **ದಶ** ಎನ್ನುವುದಕ್ಕೆ ಹತ್ತು ಎಂಬ ಅರ್ಥ ಎಲ್ಲರಿಗೂ ತಿಳಿದಿದೆ ಅಲ್ಲವೆ! ಹಾಗಾದರೂ ದಶರಾ ಎಂದರೆ ಹತ್ತು ಎಂದು ಅರ್ಥವಾಗುತ್ತದೆ ಅಲ್ಲವೆ!! ಹಾಗಾದರೂ ಹತ್ತು ಎಂದರೆ ಏನು ಎಂದು ಯೋಚಿಸಬಹುದು ಅಲ್ಲವೆ!!!

ದಶರಾ ಎಂದರೆ ಹತ್ತನ್ನು ಕುರಿತ ಏನೊ ವಿಶೇಷ ಸಮಾಚಾರ ಇದೆಯೆಂದು ಯಾರೂ ತಿಳಿದುಕೊಳ್ಳುತ್ತಿಲ್ಲ. ದಶರಾ ಎನ್ನುತ್ತಲೇ ಕೆಲವರು ನೌಕರರು ದಶರಾ ಮಾಮೂಲಿ ಹೆಸರಿನಲ್ಲಿ ಹಣ ವಸೂಲು ಮಾಡಬಹುದೆಂದು ಸಂತಸಪಡುತ್ತಿರುತ್ತಾರೆ. ಈ ಹಬ್ಬ ಬಂದರೆ ದಶರಾ ಮಾಮೂಲಿ ಎಂದು ಬಹಳಜನ ಹಣ ಕೇಳುತ್ತಾರೆಂದು, ಕೇಳಿದವರಿಗೆ ಕೊಡದೆಹೋದರೆ ಚೆನ್ನಾಗಿರುವುದಿಲ್ಲವೆಂದು, ಕೊಡಬೇಕೆಂದುಕೊಂಡರೆ ತಮ್ಮ ಹತ್ತಿರ ಹಣ ಇಲ್ಲವೆಂದು ತಪ್ಪದೆ ಸಾಲಮಾಡಿ ಬಡ್ಡಿಕೊಟ್ಟು ಮರ್ಯಾದೆಗೋಸ್ಕರ ಮಾಮೂಲಿ ಕೊಡುವವರು

ಕೆಲವರು ಇದ್ದಾರೆ. ದಶರಾ ಬಂದರೆ ಮಾಮೂಲಿ ರೂಪದಲ್ಲಿ ಬಂದಿರುವ ಹಣದಿಂದ ಕೆಲವರು ಹಳೆಸಾಲಗಳನ್ನು ತೀರಿಸಿಕೊಳ್ಳುವುದು ಮಾಡುತ್ತಿದ್ದರೆ, ಕೆಲವರು ಮಾಮೂಲಿರೂಪದಲ್ಲಿ ಇತರರಿಗೆ ಹಣ ಕೊಡುವುದರಿಂದ ಹೊಸ ಸಾಲಗಳ ಪಾಲಾಗುತ್ತಿದ್ದಾರೆ. ಪೂರ್ವದಲ್ಲಿ ಹಿರಿಯರು ದಶರಾ ಹಬ್ಬ ಒಳ್ಳೆಯ ಜ್ಞಾನ ಸಂದೇಶವನ್ನು ಪ್ರಜೆಗಳಿಗೆ ನೀಡುತ್ತದೆಂದುಕೊಂಡರೆ, ಹಾಗಲ್ಲದೆ ದಶರಾಹಬ್ಬ ಪ್ರಜೆಗಳಲ್ಲಿ ಮಾಮೂಲಿಯೆಂಬ ದುರಭ್ಯಾಸವನ್ನು ಕಲಿಸಿದಂತಿದೆ. ಯಾವಾಗಲೂ ಹಿಂದೂಸಂಸ್ಕೃತಿ ರಕ್ಷಿಸಬೇಕೆಂದು ಪರಮತಸ್ಥರ ಮೇಲೆ ಬೀಳುತ್ತಿರುವ ಹಿಂದೂಸಂಸ್ಥೆಗಳು ತಮ್ಮ ಮತದಲ್ಲಿನ ಹಬ್ಬಗಳ ಸಂಸ್ಕೃತಿಗೆ ಬೆಂಕಿಬಿದ್ದು ಹೋಗುತ್ತಿದೆಯೆಂದು ಗ್ರಹಿಸಲಾರದಿದ್ದಾರೆ. ಈ ಮಾಮೂಲಿಗಳು ಒಳ್ಳೆಯವಲ್ಲ ವೆಂದು ಹೇಳಲಾರದಿದ್ದಾರೆ. ಹಿಂದೂಮತದಲ್ಲಿ ಯಾವ ಸ್ವಾಮೀಜಿ ಸಹ ಮಾಮೂಲಿಗಳ ದುರಭ್ಯಾಸವನ್ನು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಾಗಲಿ ಖಂಡಿಸುತ್ತಿಲ್ಲ. ಯಾರೂ ಖಂಡಿಸದೆ ಹೋದರೂ ನಾವು ಕೆಲವು ವರ್ಷಗಳಿಂದ ಈ ವಿಷ ಸಂಸ್ಕೃತಿಯನ್ನು ಖಂಡಿಸುತ್ತಲೇ ಇದ್ದೇವೆ. ಹಿಂದೂ ಸಂಸ್ಕೃತಿ ಚೆನ್ನಾಗಿರಬೇಕೆಂದು ನಾವು ಮಾಡುವ ಪ್ರಯತ್ನವನ್ನು, ನಾವು ಹೇಳುವ ಬೋಧನೆಗಳನ್ನು ನೋಡಿದ ಪ್ರಜೆಗಳು ಜ್ಞಾನ ಎಂದರೆ ಇದು ಎಂದು ಸಂತೋಷಪಡುತ್ತಿರುವಾಗ, ಹಿಂದೂಮತದಲ್ಲಿ ನಾವು ಬಹು ಮುಖ್ಯವಾದ ವರೆಂದು ಪದವಿಗಳಂತೆ ಕೆಲವು ಹೆಸರುಗಳನ್ನು ಇಟ್ಟುಕೊಂಡ ಕೆಲವರು ನಮ್ಮನ್ನು ನೋಡಿ ಸಹಿಸಲಾರದೆ ನಮ್ಮನ್ನು ಹಿಂದೂಗಳೇ ಅಲ್ಲವೆನ್ನುವಂತೆಯೂ, ನಾವು ಬೇರೆ ಮತಗಳನ್ನು ಕುರಿತು ಬೋಧಿಸುತ್ತಿದ್ದೇವೆನ್ನು ವಂತೆಯೂ, ನಮ್ಮ ವಿರುದ್ಧ ಪ್ರಚಾರ ಮಾಡುತ್ತಿದ್ದಾರೆ. ಅಂತಹವರು ಏನು ಪ್ರಚಾರ ಮಾಡಿದರೂ ನಾವು ಯಾರಾಗಿರುವುದು, ಏನು ಮಾಡುತ್ತಿರುವುದು ಪ್ರಜೆಗಳಿಗೆ ಕಾಣಿಸುತ್ತಿದೆ ಅಲ್ಲವೆ!

ಪೂರ್ವದಲ್ಲಿರುವ **ದಶರ** ಎಂಬ ಹೆಸರು ಕಾಲಕ್ರಮವಾಗಿ ಹೇಳುವುದರಲ್ಲಿ **ದಶರಾ ಆಗಿ** ಬದಲಾಗಿಹೋಗಿದೆಯೆಂದು ತಿಳಿದುಕೊಂಡಿದ್ದೇವೆ.

ಅಷ್ಟೇ ಅಲ್ಲದೆ ದಶರಾ ಎನ್ನುವ ಹೆಸರು **"ವಿಜಯದಶಮಿ"** ಯಾಗಿ ಸಹ ಕರೆಯಲ್ಪಡುತ್ತಿದೆ. ಪೂರ್ವದಲ್ಲಿ ಜ್ಞಾನಿಗಳು ಇಟ್ಟಿರುವ ದಶರ ಎಂಬ ಹೆಸರಿನಲ್ಲಿ ಹತ್ತು ನಾಶವಾಗುವುವೆಂದು ಅರ್ಥ ಒಳಗೊಂಡಿದ್ದರೆ, ಈದಿನ ಇರುವ ವಿಜಯದಶಮಿ ಒಂದರ ಹೆಸರಿನಲ್ಲಿ ಹತ್ತು ವಿಜಯ ಹೊಂದಿರುವವು ಎಂಬ ಅರ್ಥವಿದೆ. **ದಶ ಎಂದರೂ ದಶಮಿ ಎಂದರೂ ಹತ್ತುಯೆಂದೇ ಅರ್ಥ ಬರುತ್ತದೆ.** ಆದರೆ 'ರ' ಎಂದರೆ ನಾಶವೆಂದು ಅರ್ಥ ಇರುವಾಗ, ವಿಜಯ ಎಂದರೆ ದೊಡ್ಡ ಜಯ, ದೊಡ್ಡ ಗೆಲವು ಎಂದು ಎಲ್ಲರಿಗೂ ತಿಳಿದಿರುವುದೆ. ಯುದ್ಧದಲ್ಲಿ ಒಬ್ಬನು ನಾಶವಾದರೆ ಮತ್ತೊಬ್ಬನು ವಿಜಯವನ್ನು ಹೊಂದುತ್ತಾನೆ. **ಪೂರ್ವವೇನೊ ಹತ್ತು ನಾಶವಾದ ದಿನ ದಶರ ಎಂದು ಹಿರಿಯರು ಹೇಳಿದರೆ, ಈಗಲೇನೊ ಹತ್ತು ವಿಜಯ ಹೊಂದಿದ ದಿನ ವಿಜಯದಶಮಿ ಎನ್ನುತ್ತಿದ್ದಾರೆ.** ಯಾವುದು ಸರಿಯಾದುದೊ ನೀವೇ ಯೋಚಿಸಿರಿ. ಕೆಲವರೇನೊ ಆಧ್ಯಾತ್ಮಿಕತೆ ಇಲ್ಲದ ಪುರಾಣವನ್ನು ಸೃಷ್ಠಿಸಿ ದುರ್ಗಾದೇವಿ ವಿಜಯ ಹೊಂದಿದ ದಿನವೆಂದು, ನವರಾತ್ರಿಗಳ ಪೂಜೆಗಳು ದುರ್ಗಾದೇವಿಗೆ ಮಾಡುತ್ತಾ ಕೊನೆಯ ಹತ್ತನೆ ದಿನ ದೇವಿ ವಿಜಯ ಹೊಂದಿದ ದಿನವೆಂದು ಹೇಳುತ್ತಿದ್ದಾರೆ. ಮಹಿಷಾಸುರನೆಂಬ ರಾಕ್ಷಸನನ್ನು ಒಂಭತ್ತುಬಾರಿ ಸಾಯಿಸಿದಾಗ ಅವನು ಬದುಕಿದ್ದಾನೆಂದು ಕೊನೆಯದಾಗಿ ಹತ್ತನೆಬಾರಿ ದುರ್ಗಾದೇವಿ ಪೂರ್ತಿ ಬದುಕದಂತೆ ಸಾಯಿಸಿದ್ದಾಳೆಂದು, ಆದ್ದರಿಂದ ಅದನ್ನು ವಿಜಯದಶಮಿ ಎನ್ನುತ್ತಿದ್ದೇವೆಂದು ಕೆಲವರು ಅನ್ನುತ್ತಿದ್ದಾರೆ. ದೇವತೆಗಳು ಕೊಟ್ಟಿರುವ ಹತ್ತು ವಿಧಗಳ ಆಯುಧಗಳಿಂದ ಮಹಿಷಾಸುರನನ್ನು ಸಾಯಿಸಿದ್ದಾಳೆ ಆದ್ದರಿಂದ ವಿಜಯದಶಮಿ ಎನ್ನುತ್ತಿದ್ದೇವೆಂದು ಕೆಲವರು ಹೇಳುತ್ತಿದ್ದಾರೆ. ಯಾವುದು ಏನಾದರು ಮಾನವನ ಆತ್ಮೋನ್ನತಿಗೆ ಒಳಿತಾಗುವಂತಹ ಆಧ್ಯಾತ್ಮಿಕತೆ ಅವರು ಹೇಳುವ ಕಥೆಗಳಲ್ಲಿ ಇಲ್ಲವೆಂದು ತಿಳಿಯುತ್ತದೆ. ಅದರಿಂದ ತನ್ನ ವಿಷಯವಾಗಿ ಮನುಷ್ಯ ಆಲೋಚಿಸದೆ ದಶರವನ್ನು ದುರ್ಗಾದೇವಿ ವಿಜಯವೆಂದುಕೊಳ್ಳುತ್ತಿದ್ದಾನೆ. ಆದರೆ ತನಗೆ ಹಿರಿಯರು ತಿಳಿಸಿದ ಜ್ಞಾನಸಂದೇಶವೇ ದಶರಾ ಎಂದು ಗ್ರಹಿಸುತ್ತಿಲ್ಲ.

ದಶರಾ ಹಬ್ಬದ ಸಮಯದಲ್ಲಿ ಆಯುಧಗಳ ಪೂಜೆಮಾಡುವುದು ಈಗಿನ ಕಾಲದಲ್ಲಿಯೂ ಇದ್ದು, ಕೆಲವರು ಅವರು ಕೆಲಸಮಾಡುವ ಸಲಕರಣೆ (ಪರಿಕರ) ಗಳಿಗೆ ಪೂಜೆ ಮಾಡಿದರೆ ಕೆಲ ರೌಡಿಗಳು, ಪಾರ್ಟಿಗಳ ನಾಯಕರು (ಫ್ಯಾಕ್ಷನ್‌ನಾಯಕರು) ನೇರವಾಗಿ ಮಾರಣಾಯುಧಗಳಿಗೆ ಪೂಜೆಗಳನ್ನು ಮಾಡುತ್ತಿದ್ದಾರೆ. ಹೀಗೆ ಆಯುಧಗಳ ಪೂಜೆಯಾಗಿ ದಶರಾ ಬದಲಾಗಿಹೋಗುವುದು ವಿಚಿತ್ರವಾಗಿದೆ. ಹಾಗೆ ಮಾರಣಾಯುಧಗಳ ಪೂಜೆಗಳು ಮಾಡುವುದಕ್ಕು ಸಹ ಕೆಲವರು ಕೆಲವು ಕಟ್ಟು ಕಥೆಗಳನ್ನು ಹೆಣೆದಿದ್ದಾರೆ. ಹೀಗೆ ದಶರಾ ಹಬ್ಬದಲ್ಲಿ ಆಧ್ಯಾತ್ಮಿಕತೆ ಸ್ವಲ್ಪವೂ ಇಲ್ಲದಹಾಗೆ ಹೋಗಿ ಪುಕ್ಕಡಿ ಪುರಾಣಗಳ ಪ್ರಾಬಲ್ಯ ಏರ್ಪಟ್ಟಿದೆ. ಆದ್ದರಿಂದ ಪೂರ್ವದಲ್ಲಿ ಹಿರಿಯರು ಇಟ್ಟಿರುವ ಆಧ್ಯಾತ್ಮಿಕ ಭಾವನೆ ಮಾಯವಾಗಿ ಹೋಗಿ ಹೊಸ ಆಚರಣೆಗಳಿಂದ ರೂಪಬದಲಾಗಿರುವ ದಶರಾ ಹಬ್ಬ ಈದಿನ ನಮ್ಮಮುಂದಿದೆ. ಪೂರ್ವದಲ್ಲಿ ಬ್ರಹ್ಮವಿದ್ಯೆಯನ್ನು ತಿಳಿದ ಜ್ಞಾನಿಗಳು, ಪ್ರಜೆಗಳು ಅಜ್ಞಾನದಲ್ಲಿ ಇರಬಾರದೆಂಬ ಭಾವದಿಂದ ಕೆಲವು ಹಬ್ಬಗಳನ್ನು ಭಾವಯುಕ್ತವಾಗಿ ಇಟ್ಟಿರುವಾಗ, ಈದಿನ ಅವರ ಭಾವನೆಗೆ ವಿರುದ್ಧವಾಗಿ ಹಬ್ಬಗಳು ತಯಾರಾಗಿವೆ, ಈಗಲಿಂದಾದರೂ ಹಿರಿಯರು ತಿಳಿಸಿದ ಜ್ಞಾನ ಮಾರ್ಗದ ಪ್ರಕಾರ, ಅವರು ತಿಳಿಸಿದ ಅರ್ಥದಿಂದಲೇ ದಶರಾ ಹಬ್ಬವನ್ನು ಮಾಡಿಕೊಳ್ಳೋಣ. ಹಬ್ಬದ ವಿವರ ತಿಳಿಯದವರಿಗೂ ಸಹ ಅದರ ವಿವರ ವೆಲ್ಲವನ್ನು ತಿಳಿಸಿ ಅವರನ್ನು ಸಹ ಸಕ್ರಮವಾಗಿ ಆಚರಿಸುವಂತೆ ಮಾಡೋಣ.

ದಶರಾ ಹಬ್ಬ ವರ್ಷದ ಕೊನೆಯಲ್ಲಿ, ಅಂದರೆಚಳಿಗಾಲದ ಮೊದಲಿನಲ್ಲಿಯೆ ಬರುತ್ತಿದೆ. ನಮ್ಮ ಶರೀರದ ಮೇಲಿರುವ ಸ್ಥೂಲಶರೀರವೆಂಬ ಹತ್ತು ಅವಯವಗಳು ಆ ಕಾಲದಲ್ಲಿ ಎಲ್ಲರಿಗೂ ಜ್ಞಾಪಕ ಬರುತ್ತವೆ. ಜಾಸ್ತಿ ಚಳಿಯಾಗುವುದು ಮೇಲಿನ ಹತ್ತು ಅವಯವಗಳಿಗೆ ಅಲ್ಲವೆ! ಆಗ ಪಾಮರನಿಗಾದರೂ, ಪಂಡಿತನಿಗಾದರೂ ಚಳಿ ಶರೀರವನ್ನು ಗುರುತು ಮಾಡುತ್ತಿದೆ. ಆಗ ಚಳಿಯ ಬಾಧೆಯಿಂದ ಹೊರಬೀಳುವುದಕ್ಕೆ ಹತ್ತು ಅವಯವಗಳನ್ನು ಬೆಚ್ಚನೆಯ ಬಟ್ಟೆಗಳಿಂದ ಮುಚ್ಚಿಟ್ಟು ಹೊರಗೆ ಕಾಣಿಸದಹಾಗೆ ಮಾಡುತ್ತೇವೆ. ಹೀಗೆ ಹತ್ತು

ಅವಯವಗಳನ್ನು ಕಾಣಿಸದಂತೆ ಮುಚ್ಚಿಟ್ಟುಕೊಳ್ಳುವುದು ಬೆಚ್ಚನೆಯ ಸುಖಕ್ಕೋಸ್ಕರವೆ ಅಲ್ಲವೆ! ಹಾಗೆಯೇ ಹತ್ತು ಅವಯವಗಳ ಕೆಲಸವನ್ನು ನಿರೋಧಿಸಿ ಅವುಗಳನ್ನು ಜ್ಞಾನವೆಂಬ ಬಟ್ಟೆಗಳಿಂದ ಮುಚ್ಚಿ, ಇಲ್ಲದಹಾಗೆ ಮಾಡಿ ಮೋಕ್ಷವೆಂಬ ಸುಖಕ್ಕೋಸ್ಕರ ಪ್ರಯತ್ನಿಸೆಂದು ತಿಳಿಸುವುದಕ್ಕೆ ಚಳಿಗಾಲದ ಆರಂಭದಲ್ಲಿಯೇ ದಶರಾ ಹಬ್ಬ ಬರುತ್ತಿದೆ. ಚಳಿಗಾಲದ ಆರಂಭದಲ್ಲಿಯೇ ಶರೀರವನ್ನು ಹೊದ್ದುಕೊಳ್ಳುವುದಕ್ಕೆ ದುಪ್ಪಟಗಳನ್ನು ಹುಡಿಕಿಕೊಳ್ಳುವಹಾಗೆ, ಶರೀರದ ಹತ್ತು ಅವಯವಗಳ ಕೆಲಸದಿಂದ ಬರುವ ಕರ್ಮ ಫಲದ ಸಂಬಂಧ ಇಲ್ಲದಂತೆ ಮಾಡುವ ಆತ್ಮ ಜ್ಞಾನವನ್ನು ಹುಡಿಕಿಕೊಳ್ಳಬೇಕು. ಈ ವಿಧವಾಗಿ ದಶರಾಹಬ್ಬ ಉನ್ನತವಾದ ಜ್ಞಾನಮಾರ್ಗಕ್ಕೆ ನಾಂದಿ ಹೇಳುತ್ತಿದೆ. ಚಳಿ ಬಾಧೆಯನ್ನು ಇಲ್ಲದಹಾಗೆ ಮಾಡಿಕೊಳ್ಳುವುದಕ್ಕೆ ದುಪ್ಪಟ ಹೇಗೆ ಅಗತ್ಯವೊ ಹಾಗೆಯೇ ಕರ್ಮ ಬಾಧೆಯನ್ನು ಇಲ್ಲದಹಾಗೆ ಮಾಡಿಕೊಳ್ಳುವುದಕ್ಕೆ ಜ್ಞಾನ ಅಗತ್ಯವೆಂದು ದಶರಾ ಚಳಿಗಾಲದ ಪ್ರಾರಂಭದಲ್ಲಿಯೆ ಬರುತ್ತಿದೆ. ಈಗಿನಿಂದಾದರೂ ಚಳಿ ನಿವಾರಣೆಗೆ ದುಪ್ಪಟ ಉಪಯೋಗಿಸಿದಹಾಗೆ ಕರ್ಮನಿವಾರಣೆಗೆ ಜ್ಞಾನವನ್ನು ಉಪಯೋಗಿಸಿಕೊಳ್ಳೋಣ.

# ಶಿವರಾತ್ರಿ

ಆಧ್ಯಾತ್ಮಿಕ ಭಾವಾರ್ಥ ಹಬ್ಬಗಳಲ್ಲಿ ಯುಗಾದಿ, ದಶರಾ, ಸಂಕ್ರಾಂತಿ ಜೊತೆಗೆ ಶಿವರಾತ್ರಿ ಸಹ ಮುಖ್ಯವಾದ ಹಬ್ಬವಾಗಿ ಮೊದಲಿನಿಂದ ಮಾಡಲ್ಪಡುತ್ತಿದೆ. ಯುಗಾದಿಯ ನಂತರ ಎಲ್ಲಾ ಹಬ್ಬಗಳಿಗಿಂತ ಪ್ರಾಚೀನವಾದ ಹಬ್ಬ ಶಿವರಾತ್ರಿಯೆ! ಭೂಮಿಮೇಲೆ ನೆಲೆಸಿದ ಮೊಟ್ಟಮೊದಲ ದೇವಸ್ಥಾನ ಈಶ್ವರನ ಲಿಂಗವಿರುವ ಗುಡಿಯೇ! ಬೇರೆ ಯಾವುದೆ ಪ್ರತಿಮೆ ಇಲ್ಲದಿರುವಾಗ ಮೊಟ್ಟಮೊದಲ ಪ್ರತಿಮೆ ಶಿವಲಿಂಗವೆ!! ಇಡಿ ಪ್ರಪಂಚ ಮೇಲೆ ಒಂದು ಭಾರತದೇಶದಲ್ಲಿಯೇ ಮೊದಲ ಲಿಂಗಪ್ರತಿಷ್ಠೆ ಕೃತಯುಗದಲ್ಲಿಯೆ ನಡೆದಿದೆ. ಈಶ್ವರಲಿಂಗ ಎಷ್ಟೊ ಅರ್ಥದಿಂದ ದೊಡ್ಡ ಆಧ್ಯಾತ್ಮಿಕ ಭಾವಾರ್ಥದಿಂದ ನಿರ್ಮಿಸಲ್ಪಟ್ಟಿದೆ. ಆಗಿನ ಹಿರಿಯರ

ಭಾವಾರ್ಥ ಈದಿನ ಸ್ವಲ್ಪವಾದರೂ ಇಲ್ಲ. ಲಿಂಗವನ್ನು ಯಾರಾದರೂ ಸರಿ ಹೂಗಳಿಟ್ಟು ನಮಸ್ಕರಿಸಬೇಕಾಗಿದ್ದೇ, ಆದರೆ ಆರಾಧಿಸಬಾರದು, ಅಭಿಷೇಕ ಮಾಡಬಾರದೆಂಬ ನಿಯಮವು ಆದಿನ ಇರುತ್ತಿತ್ತು. ಈದಿನ ಈಶ್ವರಲಿಂಗಕ್ಕೆ ಅಭಿಷೇಕಗಳು, ಆರಾಧನೆಗಳ ನಿಯಮವನ್ನು ತಿಳಿಯದೆ ಮಾಡುತ್ತಿದ್ದಾರೆ. ಮುಖ್ಯವಾಗಿ ಈಶ್ವರಲಿಂಗ ಗರ್ಭಗುಡಿಯಲ್ಲಿ ಇರಬಾರದು. ಪೂರ್ವದಲ್ಲಿ ಹಿರಿಯರು ಯಾವ ಉದ್ದೇಶದಿಂದ ಶಿವಲಿಂಗವನ್ನು ಇಟ್ಟಿದ್ದಾರೊ ಆ ಉದ್ದೇಶ ಈದಿನ ಇಲ್ಲದಹಾಗೆ ಹೋಗಿದೆ. ಈಶ್ವರಲಿಂಗಕ್ಕೆ ಮೇಲೆ ಧಾರಾಪಾತ್ರೆ ಹೊರತು ಪ್ರಭಾವಳಿ ಸಹ ಇರಬಾರದು. ಲಿಂಗಕ್ಕೆ ಹೊರತು ಯಾವ ಪ್ರತಿಮೆಗಳಿಗಾದರು ಗರ್ಭಗುಡಿ ಇರಬಹುದು. ಹಾಗೆಯೇ ಲಿಂಗಕ್ಕೆ ಹೊರತುಪಡಿಸಿ ಯಾವ ಪ್ರತಿಮೆಗಾದರೂ ಅಭಿಷೇಕ, ಆರಾಧನೆ ಇರಬಹುದು. ಆದರೆ ಈದಿನ ಎಲ್ಲಾ ಪ್ರತಿಮೆಗಳಂತೆ ಲಿಂಗಕ್ಕೂ ಸಹ ಗರ್ಭಗುಡಿಯನ್ನು ನಿರ್ಮಿಸಿ ಅಭಿಷೇಕಗಳು ಮಾಡುತ್ತಿದ್ದಾರೆ. ಇದರಿಂದ ಲಿಂಗಕ್ಕಿರುವ ಪ್ರತ್ಯೇಕತೆ ಈ ಕಾಲದಲ್ಲಿ ತಿಳಿಯದಹಾಗೆ ಹೋಗಿದೆ. ಪೂರ್ವದಲ್ಲಿ ಲಿಂಗವನ್ನು ಬಯಲು ಪ್ರದೇಶದಲ್ಲಿಯೇ ಪ್ರತಿಷ್ಠಿಸುತ್ತಿದ್ದರು. ಲಿಂಗವನ್ನು ಗರ್ಭಗುಡಿಯಲ್ಲಿ ಇಡುವುದರಿಂದ, ಅಭಿಷೇಕಗಳು ಆರಾಧನೆಗಳು ಮಾಡುವುದರಿಂದ, ಲಿಂಗಕ್ಕಿರುವ ಆಧ್ಯಾತ್ಮಿಕ ಭಾವಾರ್ಥ ಪೂರ್ತಿ ಬೆಂಕಿಬಿದ್ದು ಹೋಗುತ್ತಿದೆ, ಇಂತಹ ಅಜ್ಞಾನದ ಕೆಲಸಗಳು ಭವಿಷ್ಯತ್ತಿನಲ್ಲಿ ಯಾರಾದರೂ ಮಾಡುತ್ತಾರೇನೊ ಎಂದು ಊಹಿಸಿದ ಬ್ರಹ್ಮಜ್ಞಾನಿಗಳು ಹಾಗೆ ಮಾಡುವಂತೆ ಪೂರ್ವದಲ್ಲಿಯೇ ಶಿವರಾತ್ರಿ ಹಬ್ಬವನ್ನು ಉದ್ದೇಶಪೂರ್ವಕವಾಗಿ ಇಟ್ಟಿದ್ದಾರೆ. ಅದರೂ ಶಿವರಾತ್ರಿಯೊಂದರ ಉದ್ದೇಶ ಸಹ ತಿಳಿಯದವರು ಹಿರಿಯರ ಭಾವನೆಗೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದಾರೆ, ಶಿವರಾತ್ರಿ ದಿನವೇ ಹೆಚ್ಚಾಗಿ ಅಭಿಷೇಕಗಳು, ಆರಾಧನೆಗಳು ಮಾಡುವುದು ನಡೆಯುತ್ತಿದೆ. ಈ ಕಾಲದಲ್ಲಿ ತಿಳಿಯದಹಾಗೆ ಹೋಗಿರುವ ಪೂರ್ವದಲ್ಲಿನ ಹಿರಿಯರ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳೋಣ.

ಭೂಮಿಮೇಲೆ ಯಾವ ದೇವಾಲಯಗಳು ಇಲ್ಲದ ದಿನ ಮೊದಲ ನೆಯದಾಗಿ ಪರಮಾತ್ಮ (ದೇವರ) ಉದ್ದೇಶವನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ,

ದೇವರು ರೂಪ ಇಲ್ಲದವನೆಂದು ತಿಳಿಸುವುದಕ್ಕೆ ಮುಖ, ಮೂಗು ಇಲ್ಲದ ಕಲ್ಲನ್ನು ತೋರಿಸಿದ್ದಾರೆ. ಯಾವ ಕಡೆ ನೋಡಿದರೂ ಮುಖವಿಲ್ಲದ ಲಿಂಗವನ್ನು ದೇವರಿಗೆ ಗುರುತಾಗಿ ಇಟ್ಟಿದ್ದಾರೆ. ಪೂರ್ವದ ಈಶ್ವರಲಿಂಗ ಬಯಲು ಪ್ರಾಂತದಲ್ಲಿ ಇರುತ್ತಿತ್ತು. ಪರಮಾತ್ಮ ಹುಟ್ಟು ಇಲ್ಲದವನು ಆದ್ದರಿಂದ ಆತನಿಗೆ ಗರ್ಭದಿಂದ ಹುಟ್ಟುವ ಅವಕಾಶವಿಲ್ಲ. ಆದ್ದರಿಂದ ಪರಮಾತ್ಮ ಹುಟ್ಟಲ್ಪಡುವವನಲ್ಲವೆಂದು ತಿಳಿಸುವುದಕ್ಕೆ ಗರ್ಭವೆಂಬ ಗುಡಿಯಲ್ಲಿ, ಅಂದರೆ ಗರ್ಭಗುಡಿಯಲ್ಲಿ ಲಿಂಗವನ್ನು ಇಡುತ್ತಿರಲಿಲ್ಲ. ರೂಪವಿಲ್ಲದ ದೇವರಿಗೆ ಮಾನವಾಕೃತಿಯ ಹೆಂಡತಿಯೂ ಇಲ್ಲ. ದೇವರಿಗೆ ಪತ್ನಿ ಪ್ರಕೃತಿಯೆ. ಆದ್ದರಿಂದ ಪ್ರಕೃತಿಯನ್ನು ಲಿಂಗದಕೆಳಗೆ ಪಾಣಿಪಟ್ಟ (ವಟ್ಟ) ವಾಗಿ ಇಟ್ಟಿದ್ದಾರೆ. ಆದ್ದರಿಂದ ಆಕಾರವಿರುವ ಪಾರ್ವತಿಯನ್ನು ಪಕ್ಕದಲ್ಲಿ ಪ್ರತಿಷ್ಠಿಸುವಂತಿರಲಿಲ್ಲ. ಕೃತಯುಗದಲ್ಲಿ ಪೂರ್ತಿ ದೈವತ್ವ ಸಂಬಂಧ ವಿಷಯ ತಿಳಿಯುವಹಾಗೆ, ಪ್ರಕೃತಿ, ಪರಮಾತ್ಮ ರಿಂದ ಸೃಷ್ಟಿಸಲ್ಪಡುತ್ತಿರುವ ಜೀವಿಗಳನ್ನು ಲಿಂಗಪ್ರತಿಷ್ಠೆಯಲ್ಲಿ ನೋಡುತ್ತಲೇ ಅರ್ಥವಾಗುವಂತೆ ಇಟ್ಟಿದ್ದಾರೆ. ಪೂರ್ವದ ಜ್ಞಾನಿಗಳು ಎಷ್ಟೊ ಜ್ಞಾನದಿಂದ ಲಿಂಗಪ್ರತಿಷ್ಠೆಯನ್ನು ಬಯಲಿನಲ್ಲಿಯೆ ಮಾಡಿ, ಪಕ್ಕದಲ್ಲಿ ಯಾವ ಪ್ರತಿಮೆ ಇಲ್ಲದಹಾಗೆ ಇಡುತ್ತಿದ್ದರು. ದೇವರಿಗೆ ವಾಹನವೇನೂ ಇಲ್ಲ ಆದ್ದರಿಂದ ಈ ಕಾಲದಲ್ಲಿರುವ ನಂದಿವಾಹನ ಸಹ ಪೂರ್ವದಲ್ಲಿಲ್ಲ. ಕಾಲಕ್ರಮವಾಗಿ ಮಾಯೆ ಪ್ರಭಾವ ಹೆಚ್ಚಾಗಿಹೋಗಿ ಅಜ್ಞಾನ ಬೆಳೆದುಹೋಗಿರುವು ದರಿಂದ ಲಿಂಗ ಗರ್ಭಗುಡಿಯಲ್ಲಿ ಪ್ರತಿಷ್ಟಿಸಿರುವುದೂ, ಲಿಂಗದ ಪಕ್ಕದಲ್ಲಿ ಪಾರ್ವತಿಯನ್ನು ಇಡುವುದು, ಲಿಂಗದ ಎದುರು ನಂದಿಯನ್ನು ಇಡುವುದು ನಡೆದಿದೆ. ಇದನ್ನೆಲ್ಲಾ ಸಮರ್ಥಿಸಿಕೊಳ್ಳುವುದಕ್ಕೆ ಕೆಲವರು ಪುರಾಣಗಳ ಹೆಸರಿನಿಂದ ಕಥೆಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಕೊರಳಿನಲ್ಲಿ ಹಾವಿರುವ ಶಂಕರನು ಮಹರ್ಷಿ ಶಾಪದಿಂದ ಕಲ್ಲಾಗಿ ಬದಲಾಗಿದ್ದಾನೆಂದು, ಆ ಕಲ್ಲೆ ಲಿಂಗವೆಂದು ಪ್ರಚಾರ ಮಾಡಿದ್ದಾರೆ. ಅಮಾಯಕ ಪ್ರಜೆಗಳು ಅದನ್ನೆ ನಿಜವೆಂದು ನಂಬಿದ್ದಾರೆ.

ಕೊರಳಿನಲ್ಲಿ ಹಾವಿರುವ ನಟರಾಜನಾದ ಶಂಕರನಿಗೆ, ಲಿಂಗರೂಪ ದಲ್ಲಿರುವ ಈಶ್ವರನಾದ ಪರಮಾತ್ಮನಿಗೆ ಯಾವ ಸಂಬಂಧವಿಲ್ಲ. ಶಂಕರನಿಗೆ

ಪತ್ನಿಯಾಗಿ ಪಾರ್ವತಿದೇವಿ ಇದ್ದಾಳೆ, ಹಾಗೆ ಮಕ್ಕಳು ಸಹ ಇದ್ದಾರೆ. ಈಶ್ವರನಿಗೆ ಆಕಾರವಿಲ್ಲ ಶಂಕರನಿಗಿರುವಂತೆ ಕುಟುಂಬವಿಲ್ಲ. ಬಹಳಜನ ಪ್ರಜೆಗಳು ಶಂಕರನೆಂದರೂ, ಈಶ್ವರನೆಂದರೂ, ಶಿವ ಎಂದರೂ ಒಂದೇ ಎಂದು ಕೊಳ್ಳುತ್ತಿದ್ದಾರೆ. ಹಾಗೆ ಅಂದುಕೊಳ್ಳುವುದು ಬಹಳ ತಪ್ಪು. ಶಂಕರನು ತ್ರಿಮೂರ್ತಿ ಗಳಲ್ಲಿ ಒಬ್ಬನಾಗಿದ್ದು, ಈಶ್ವರನೆಂದರೂ, ಶಿವನೆಂದರೂ ವಿಶ್ವವೆಲ್ಲಾ ಆವರಿಸಿದ ಪರಮಾತ್ಮನೆಂದು ತಿಳಿಯಬೇಕು. ಪರಮಾತ್ಮನಿಗೆ ರೂಪವೇ ಅಲ್ಲ ಹೆಸರು ಕೂಡಾ ಇಲ್ಲ. ಅದರ ಪ್ರಕಾರ 'ಈಶ್ವರ' 'ಶಿವ' ಎನ್ನುವವು ಹೆಸರುಗಳಲ್ಲ. ಪರಮಾತ್ಮವೊಂದರ ಹಿರಿಮೆಯನ್ನು ತಿಳಿಸುವ ಅರ್ಥದಿಂದ ಕೂಡಿಕೊಂಡ ಪದಗಳೆ ಆಗಲಿ ಅವು ಹೆಸರುಗಳು ಅಲ್ಲ. 'ಈಶ್ವರ' ಎಂದರೆ ಅಧಿಪತಿ ಎಂದು ಅರ್ಥವಿದೆ. ಸರ್ವೇಶ್ವರನು ಎಂದರೆ ಸರ್ವಕ್ಕು ಅಧಿಪತಿ ಪರಮಾತ್ಮನೆಂದು ಅರ್ಥ. 'ಶಿವ' ಎಂದರೆ ಅಗ್ನಿಗೂ ನೀರಿಗೂ ಗುರುತಾದ ಬೀಜಾಕ್ಷರಗಳು ಎಂದು ತಿಳಿಯಬೇಕು. **ಓಂ ನಮಃ ಶಿವಾಯ** ಎನ್ನುವ ಶಬ್ಧವನ್ನು ಲಿಂಗದ ಹತ್ತಿರವೇ ಉಚ್ಚರಿಸಬೇಕು. ಆಕಾರವಿರುವ ಶಂಕರನ ಹತ್ತಿರ ಉಚ್ಚರಿಸಬಾರದು. ಶಂಕರನಿಗೆ, ಪಂಚಾಕ್ಷರಿ ಎಂದು ಹೆಸರುವಾಸಿಯಾದ ಓಂ ನಮಃ ಶಿವಾಯಗೆ ಏನು ಸಂಬಂಧವಿಲ್ಲ. ಪರಮಾತ್ಮ ಪ್ರಕೃತಿಯಿಂದಲೂ ಸಹ ನಾಶವಾಗದಿರುವವ ನೆಂದು ತಿಳಿಸುವುದಕ್ಕೆ ಪಂಚಾಕ್ಷರಿ ಎಂಬ ಪದವಾಗಿ ಓಂ ನಮಃಶಿವಾಯ ಎಂದಿದ್ದಾರೆ. ಈ ಶಬ್ಧದಲ್ಲಿ ಪ್ರಕೃತಿಯಾದ ಪಂಚಭೂತಗಳಿಗೆ ಪರಮಾತ್ಮ ನಶಿಸುವವನು ಅಲ್ಲವೆಂದು **'ಓಂ'** ಅನ್ನು ಪರಮಾತ್ಮವೊಂದರ ಬೀಜಾಕ್ಷರವಾಗಿ ಇಟ್ಟಿದ್ದಾರೆ. ಹಾಗೆ **ನ** ಎನ್ನುವುದನ್ನು ಆಕಾಶವೊಂದರ ಬೀಜಾಕ್ಷರವಾಗಿ, **ಮಃ** ಎನ್ನುವುದನ್ನು ಗಾಳಿವೊಂದರ ಬೀಜಾಕ್ಷರವಾಗಿ, **ಶಿ** ಎನ್ನುವ ಅಕ್ಷರವನ್ನು ಅಗ್ನಿವೊಂದರ ಬೀಜಾಕ್ಷರವಾಗಿ, **ವ** ಎನ್ನುವುದನ್ನು ನೀರಿನೊಂದರ ಜೀಜಾಕ್ಷರವಾಗಿ, **ಯ** ಎನ್ನುವುದನ್ನು ಭೂಮಿವೊಂದರ ಬೀಜಾಕ್ಷರವಾಗಿ ಇಟ್ಟು ತೋರಿಸಿದ್ದಾರೆ. ಐದು ಅಕ್ಷರಗಳಿಗೂ ನಾಶವಾಗದಿರುವುದು **ಪಂಚ ಅಕ್ಷರಿ** ಎಂದಿದ್ದಾರೆ.

ಪಂಚ ಎಂದರೆ ಐದು ಅಕ್ಷರಗಳೆಂದು, ಆ ಐದು **ನಮಃ ಶಿವಾಯ** ಎನ್ನುವವಾಗಿದ್ದು ಆರನೆ ಅಕ್ಷರವಾಗಿ ಮೊದಲೆ ಓಂ ಇದೆ. ಪಂಚಭೂತಗಳಿಗೆ ಅತೀತವಾದ ದೈವಕ್ಕೆ ಗುರುತಾಗಿ ಓಂ ಇರುವಾಗ, ಪಂಚಭೂತಗಳಾದ ಪ್ರಕೃತಿಗೆ ಗುರುತಾಗಿ ನಮಃಶಿವಾಯ ಇದೆ. ಪೂರ್ತಿ ಜ್ಞಾನ ತಿಳಿದ ಜ್ಞಾನಿಗಳು ಪರಮಾತ್ಮನನ್ನು ಆಶ್ರಯಿಸುತ್ತಾರೆ. ಜ್ಞಾನ ತಿಳಿಯದವರು ಪ್ರಕೃತಿಯನ್ನೆ ಆಶ್ರಯಿಸುತ್ತಾರೆ. ಪ್ರಕೃತಿಯನ್ನು ಆಶ್ರಯಿಸಿದ ಅಜ್ಞಾನಿಗಳು ಸಹ ದೈವವನ್ನು ತಿಳಿಯುವಹಾಗೆ ಪ್ರಕೃತಿಯಲ್ಲಿನ ಅಗ್ನಿ, ನೀರು ಬೀಜಾಕ್ಷರಗಳನ್ನು ತೆಗೆದುಕೊಂಡು **'ಶಿವಾ'** ಎಂದಿದ್ದಾರೆ. ಇದರಿಂದ ಜ್ಞಾನಿಗಳು **'ಈಶ್ವರಾ'** ಎಂದರೂ, ಅಜ್ಞಾನಿಗಳು **'ಶಿವಾ'** ಅಂದರೂ ಇಬ್ಬರೂ ದೇವರನ್ನು ನೆನಪಿಸಿಕೊಡಂತೆ ಆಗುತ್ತಿದೆ. **'ಶಿ'** ಅಗ್ನಿಗೆ, **'ವಾ'** ನೀರಿಗೆ ಗುರುತಾದ, ಇಲ್ಲವೆ ಬೀಜಾಕ್ಷರಗಳೆಂದುಕೊಂಡಿದ್ದೇವೆ ಅಲ್ಲವೆ! ಇಲ್ಲಿ ಅಗ್ನಿ ನೀರನ್ನೆ ಏಕೆ ತೆಗೆದುಕೊಂಡಿದ್ದಾರೆಂದು ಪ್ರಶ್ನೆ ಉದ್ಭವಿಸಬಹುದು. ಅದಕ್ಕೆ ಉತ್ತರ ಏನೆಂದರೆ! ಅಗ್ನಿಯನ್ನು ನೀರಿನ ಕೆಳಗೆ ಇಟ್ಟರೆ ನೀರು ಬಿಸಿಯಾಗಿ ಆವಿಯಾಗಿ ಕಾಣಿಸದಹಾಗೆ ಹೋಗುತ್ತದೆ. ಒಂದುವೇಳೆ ನೀರನ್ನೆ ಅಗ್ನಿ ಮೇಲೆ ಹೊಯ್ದರೆ ನೀರಿಗೆ ಅಗ್ನಿ ಆರಿಹೋಗಿ ಇಲ್ಲದಂತೆ ಹೋಗುತ್ತದೆ. ಈ ವಿಧವಾಗಿ ನೀರಿನಿಂದ ಅಗ್ನಿ, ಅಗ್ನಿಯಿಂದ ನೀರು ಇಲ್ಲದಹಾಗೆ ಹೋಗುವ ಅವಕಾಶವಿದೆ. ಹಾಗೆ ಭೂಮಿ ಗಾಳಿಯನ್ನು, ಗಾಳಿ ಭೂಮಿಯನ್ನು ಇಲ್ಲದಹಾಗೆ ಮಾಡಲಾರದು. ಕಾಣಿಸದ ಆಕಾಶ ಯಾವುದಕ್ಕು ನಾಶವಾಗುವುದಿಲ್ಲ. ಆದ್ದರಿಂದ ಪ್ರಕೃತಿಯಲ್ಲಿನ ಗುರುತುಗಳಾದ ಅಗ್ನಿ, ನೀರಿಗೆ ಮಾತ್ರವೇ ಒಂದಕ್ಕೊಂದು ನಾಶ ಮಾಡಿಕೊಳ್ಳುವ ಶಕ್ತಿ ಇದೆ. ಏನು ಜ್ಞಾನ ತಿಳಿಯದವರು ಸಹ ಸ್ವಲ್ಪ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ, ಅವರು ಸಹ ಪರಮಾತ್ಮನನ್ನು ತಿಳಿಯುವುದಕ್ಕೆ ಹಿರಿಯರು ನಿರ್ಣಯಿಸಿದ ಶಬ್ಧ **'ಶಿವಾ'**. ಆದ್ದರಿಂದ ಪೂರ್ವದಲ್ಲಿ ಜ್ಞಾನ ಚೆನ್ನಾಗಿ ತಿಳಿದ ಪಂಡಿತರು ಪರಮಾತ್ಮನನ್ನು ಈಶ್ವರಾ ಎಂದು ಕರೆದರೆ, ಪೂರ್ತಿ ಜ್ಞಾನ ತಿಳಿಯದ ಅಜ್ಞಾನಿಗಳು ಶಿವಾ ಎಂದು ತಿಳಿಯುತ್ತಿದ್ದರು. ಇದರಿಂದ ಕರೆಯುವ ಶಬ್ಧವನ್ನನುಸರಿಸಿ ಯಾರು ಸಂಪೂರ್ಣ ಜ್ಞಾನಿಗಳು, ಯಾರು ಅಸಂಪೂರ್ಣ ಜ್ಞಾನಿಗಳು ಎಂದು ಕೇಳಿದವರಿಗೂ ಸಹ ತಿಳಿದುಹೋ

ಗುತ್ತಿತ್ತು. ಪೂರ್ವಕಾಲದಲ್ಲಿ ಹಾಗಿರುವಾಗ ಈದಿನ ಶಿವಾ ಎಂದು ಯಾರನನ್ನ ಬೇಕೊ, ಈಶ್ವರಾ ಎಂದು ಯಾರನನ್ನಬೇಕೊ ತಿಳಿಯದೆ ಹೋಗಿದೆ. ಕರ್ನಾಟಕ ರಾಜ್ಯದಲ್ಲಿ ಜ್ಞಾನಿಗಳು ಅಜ್ಞಾನಿಗಳು ಇಬ್ಬರೂ ಶಿವಾ ಎಂಬ ಪದವನ್ನೆ ಹೆಚ್ಚಾಗಿ ಉಚ್ಚರಿಸುತ್ತಿದ್ದಾರೆ.

ಪೂರ್ವದಲ್ಲಿನ ಓಂ ನಮಃಶಿವಾಯ ಎನ್ನುವ ಆರು ಅಕ್ಷರಗಳ ಶಬ್ಧವನ್ನು ಪಂಚಾಕ್ಷರಿ ಎನ್ನುವುದರಲ್ಲಿ ಪ್ರಕೃತಿಯಲ್ಲಿನ ಭಾಗಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವವು ಮೊದಲ ಅಕ್ಷರವಾಗಿರುವ ಪರಮಾತ್ಮ ನನ್ನು ನಾಶ ಮಾಡಲಾರವು ಎಂಬ ಅರ್ಥ ಬರುವಹಾಗೆ ಪಂಚಾಕ್ಷರಿ ಎಂದಿದ್ದಾರೆ. ಆದರೆ ಅದು ಓಂ ನಮಃಶಿವಾಯ ಎನ್ನುವ ಪಂಚಾಕ್ಷರಿ ಸ್ಥೂಲವಾಗಿ ಐದಕ್ಷರಗಳು ಅಲ್ಲ ಆರಕ್ಷರಗಳೆಂದು ತಿಳಿಯುತ್ತಿದೆ. ದೇವರ ಕಡೆಯಿಂದ ಹೇಳುತ್ತಿರುವ ಈಶ್ವರಾ ಎನ್ನುವುದಕ್ಕೆ, ಪ್ರಕೃತಿ ಕಡೆಯಿಂದ ಹೇಳುತ್ತಿರುವ ಶಿವಾ ಎನ್ನುವುದಕ್ಕೆ ಅರ್ಥವನ್ನು ಹೇಗೆ ತಿಳಿಯಲಾರದೆ ಹೋಗಿದ್ದೇವೊ, ಹಾಗೆಯೇ ಪಂಚಾಕ್ಷರಿಯಲ್ಲಿ ಆರು ಅಕ್ಷರಗಳಿವೆಯೆಂದು, ಅದರ ಅರ್ಥ ಪಂಚ ಭಾಗಗಳಾಗಿರುವ ಪ್ರಕೃತಿಗೆ ಒಂದು ಭಾಗವಾಗಿರುವ ಪರಮಾತ್ಮ ನಾಶ ಆಗದಿರುವವನೆಂದು ಸಹ ತಿಳಿಯಲಾರದೆ ಹೋಗಿದ್ದೇವೆ. ಈ ವಿಧವಾಗಿ ಸಂಪೂರ್ಣ ವಿವರ ತಿಳಿಯದ ಪರಿಸ್ಥಿತಿಯಲ್ಲಿ ಮಾನವನಿರುವಾಗ ಶಿವರಾತ್ರಿ ಒಂದರ ಅರ್ಥ, ಅದರ ಉದ್ದೇಶ ಹೇಗೆ ತಿಳಿಯುತ್ತದೆ. ಅಂತಹದರಲ್ಲಿ ಶಿವರಾತ್ರಿ ಹಬ್ಬಕ್ಕೆ ಮನುಷ್ಯ ಪೂರ್ತಿ ನ್ಯಾಯ ಮಾಡುತ್ತಾನಾ? ಅರ್ಥದಿಂದ ಕೂಡಿಕೊಂಡ ಆಚರಣೆಯನ್ನು ಹಬ್ಬದದಿನ ಆಚರಿಸುತ್ತಾನಾ? ಆದ್ದರಿಂದ ಪಂಚಾಕ್ಷರಿ ಎಂಬ ಮಾತಿಗೂ, ಈಶ್ವರಾ ಎಂಬ ಮಾತಿಗೂ, ಶಿವಾ ಎನ್ನುವ ಶಬ್ಧಕ್ಕೂ ಅರ್ಥವನ್ನು ವಿವರವಾಗಿ ಹೇಳಿಕೊಳ್ಳಬೇಕಾಗಿ ಬಂದಿದೆ. ಅಷ್ಟೇ ಅಲ್ಲದೆ **ಶಂಕರನಿಗೂ, ಈಶ್ವರನಿಗೂ ಸಂಬಂಧ ಇಲ್ಲವೆಂದು, ಶಂಕರನು ಶರೀರ ಇರುವವನೆಂದು, ಪರಮೇಶ್ವರನು ಶರೀರ ಇಲ್ಲದಿರುವವನೆಂದು ಹೇಳಬೇಕಾಗಿ ಬಂದಿದೆ**. ಇನ್ನೂ ಹೇಳಿದರೆ ಶಂಕರನು ಸಹ ಈಶ್ವರನನ್ನು ಕುರಿತು ಧ್ಯಾನಿಸುತ್ತಿದ್ದನೆಂದು, ಮೋಕ್ಷಕ್ಕೋಸ್ಕರ ಪ್ರಾರ್ಥಿಸುತ್ತಿದ್ದನೆಂದು

ಯೋಗದಂಡವನ್ನುಪಯೋಗಿಸಿ ಚರ್ಮಾಸನದ ಮೇಲೆ ಬ್ರಹ್ಮಯೋಗವನ್ನು ಆಚರಿಸುತ್ತಿದ್ದೇನೆಂದು ಹೇಳಬೇಕಾಗಿ ಬಂದಿದೆ. ಇವೆಲ್ಲ ಮೊದಲು ತಿಳಿದರೇನೆ ಶಿವರಾತ್ರಿ ಹಬ್ಬಕ್ಕೆ ಅರ್ಥ ಸುಲಭವಾಗಿ ತಿಳಿಯಬಲ್ಲದು. ಈಗ ನಾವು ಹೇಳಿರುವುದೆಲ್ಲ ಹೊಸ ವಿಷಯವಾದ್ದರಿಂದ ಹೊಸ ಆಹಾರ ತಿಂದವರಿಗೆ ಜೀರ್ಣವಾಗದಂತೆ ಕೆಲವರಿಗೆ ಈ ವಿಷಯ ಜೀರ್ಣವಾಗದಿರಬಹುದು. ನಿಮಗೆ ಅರ್ಥ ಆಗದಷ್ಟುಮಾತ್ರಕ್ಕೆ, ನಿಮಗೆ ಇಷ್ಟವಾಗದ ಮಾತ್ರಕ್ಕೆ ನಮ್ಮನ್ನು ದೂಷಿಸಿದರೂ, ಅಜ್ಞಾನಿ ಎಂದರೂ ಇನ್ನೂ ಏನಾದರೂ ಕೆಟ್ಟದಾಗಿ ಅಂದರೂ ನಿಮಿತ್ತಮಾತ್ರನಾದ ನಾನು ಮಾತ್ರ ಸಹಿಸಿಕೊಳ್ಳುತ್ತೇನೆ. ಆದರೆ ನಮ್ಮಲ್ಲಿ ನಾನು ಅಲ್ಲದೆ ಎರಡನೆಯವನಾದ ಆತ್ಮ ಇದ್ದಾನೆ ಅಲ್ಲವೆ! ಅವನು ಸಹಿಸಿಕೊಳ್ಳುವುದಿಲ್ಲ. ದೊಡ್ಡಪಾಪವನ್ನು ನಿಮಗೆ ಅಂಟುಗಟ್ಟುತ್ತಾನೆ. ಅದು ದೇವರ ಜ್ಞಾನಕ್ಕೆ ಸಂಬಂಧಿಸಿದ ಪಾಪವಾದ್ದರಿಂದ ಅದನ್ನು ಅನುಭವಿಸುವಾಗ ನೋವು ಮಾತ್ರ ಭಯಂಕರವಾಗಿರುತ್ತದೆ ಜಾಗ್ರತೆ!!

ಜೀವಿಯು ಶರೀರದಲ್ಲಿ ಜೀವಿಸುತ್ತಿದ್ದಾನೆಂದರೆ ಪಾಪಪುಣ್ಯವೆಂಬ ಕರ್ಮ ಇದೆಯೆಂದು ತಿಳಿಯುತ್ತಿದೆ. ಯಾವಾಗ ಕರ್ಮ ಮುಗಿದುಹೋದರೆ ಆಗ ಜೀವಿಯು ಮುಕ್ತಿಹೊಂದಿ ದೇವರಲ್ಲಿ ಐಕ್ಯವಾಗುತ್ತಿದ್ದಾನೆ. **ಮುಕ್ತಿ ಹೊಂದುವುದಕ್ಕೇ ನಾವು ಜ್ಞಾನವನ್ನು ತಿಳಿದುಕೊಳ್ಳಬೇಕಾಗಿದೆ. ಜ್ಞಾನ ತಿಳಿದುಕೊಳ್ಳುವುದಕ್ಕೆ ಹಬ್ಬಗಳನ್ನು ಆಚರಿಸಬೇಕಾಗಿದೆ.** ಜೀವಿಗೆ ಕರ್ಮ ಎಂಬುದು ಕಟ್ಟಿಗೆಯಂತಹದ್ದು. ಕಟ್ಟಿಗೆಗಳು ಇಲ್ಲದವನಿಗೇ ಮುಕ್ತಿ ಎಂಬ ಮನೆಯೊಳಗೆ ಪ್ರವೇಶ ಇರುತ್ತದೆ. ಕಟ್ಟಿಗೆಗಳಿರುವವನಿಗೆ ಪ್ರವೇಶ ಇಲ್ಲ. ಆದ್ದರಿಂದ ಜ್ಞಾನವೆಂಬ ಅಗ್ನಿಯಿಂದ ಕಟ್ಟಿಗೆಗಳೆಂಬ ಕರ್ಮವನ್ನು ಇಲ್ಲದಹಾಗೆ ಮಾಡಿಕೊಳ್ಳಬೇಕು. ಜೀವಿಯು ಮುಕ್ತಿ ಹೊಂದುವುದಕ್ಕೆ ಬೇಕಾಗಿರುವುದು ಜ್ಞಾನವೆಂಬ ಅಗ್ನಿ. ಆದ್ದರಿಂದ ಜೀವಿಯು ಮುಕ್ತಿ ಹೊಂದುವುದಕ್ಕೆ ಬೇಕಾಗಿರುವುದು ಪಂಚಭೂತಗಳಲ್ಲಿ ಸುಡುವ ಅಗ್ನಿಗೆ ಗುರುತಾದ 'ಶಿ' ಎಂಬ ಅಕ್ಷರವನ್ನು ತೆಗೆದುಕೊಂಡು, ಸುಟ್ಟುಹೋಗುವ ಸೌದೆಯಂತೆ ಆವಿಯಾಗಿಹೋಗುವ ನೀರಿಗೆ ಗುರುತಾದ

**‘ವಾ’** ಅನ್ನು ತೆಗೆದುಕೊಂಡು ಶಿವಾ ಎಂದಿದ್ದಾರೆ. ಇದರ ಪ್ರಕಾರ **‘ಶಿವಾ’** ಎನ್ನುವುದರಲ್ಲಿ ಜ್ಞಾನಾಗ್ನಿಯಿಂದ ಕರ್ಮ ಎಂಬ ಕಟ್ಟಿಗೆಗಳನ್ನು ಇಲ್ಲದಹಾಗೆ ಮಾಡಿಕೊಳ್ಳುತ್ತೇನೆಂದು ಅರ್ಥ. ಜ್ಞಾನದಿಂದ ಕರ್ಮಹೋದರೆ ಮುಕ್ತಿಯನ್ನು ಪಡೆಯಬಹುದು, ಅಂದರೆ ದೈವವನ್ನು ಪಡೆಯಬಹುದು. ದೇವರು ತ್ರಿಗುಣರಹಿತನು. ಗುಣಗಳಿರುವುದು ಹಗಲೆಂದು, ರಾತ್ರಿ ಗುಣಗಳಿರುವುದಿಲ್ಲವೆಂದು, ಆದ್ದರಿಂದ ಮಾಯೆಗೆ ಗುರುತು ಹಗಲೆಂದು, ದೇವರಿಗೆ ಗುರುತು ರಾತ್ರಿಯೆಂದು **‘ಸುಬೋಧ’** ಎನ್ನುವ ಗ್ರಂಥದಲ್ಲಿ ಈಗಾಗಲೇ ಹೇಳಿಕೊಂಡಿದ್ದೇವೆ. ಜ್ಞಾನವೆಂಬ ಅಗ್ನಿಯಿಂದ ಕರ್ಮಗಳೆಂಬ ಕಟ್ಟಿಗೆಗಳನ್ನು ಆಹುತಿ ಮಾಡಿ, ಮೂರು ಗುಣಗಳು ಇಲ್ಲದ ರಾತ್ರಿ ಎನ್ನುವ ದೇವರನ್ನು ಹೊಂದುತ್ತೇನೆ ಎಂಬ ಭಾವನೆಯಿಂದ ಸುಡುವ ಅಗ್ನಿಗೆ ಗುರುತಾಗಿ **‘ಶಿ’** ಎಂದೂ, ಸುಡಲ್ಪಡುವ ಕರ್ಮಕ್ಕೆ ಗುರುತಾಗಿ **‘ವಾ’** ಎಂದೂ, ಹೊಂದಲ್ಪಡುವ ದೇವರಿಗೆ ಗುರುತಾಗಿ ರಾತ್ರಿ ಎಂದೂ ಅರ್ಥದಿಂದ ಪೂರ್ವದಲ್ಲಿ ಯುಗಾದಿ ನಂತರ ಮೊಟ್ಟಮೊದಲು ಇಟ್ಟಿರುವ ಹಬ್ಬ “ಶಿವರಾತ್ರಿ”. ನೋಡಿದ್ದೀರಾ! ಶಿವರಾತ್ರಿಯಲ್ಲಿ ಒಳಗೊಂಡಿರುವ ಅರ್ಥ ಎಷ್ಟು ಶ್ರೇಷ್ಠವಾದುದೊ!! ದೊಡ್ಡದೊ!!

ಮಾನವನಿಗೆ ಮೋಕ್ಷವನ್ನು ಸೂಚಿಸುವ ಶಿವರಾತ್ರಿಯನ್ನು ದೊಡ್ಡವರು ಮೊದಲು ಹಬ್ಬವಾಗಿಟ್ಟು ತೋರಿಸಿದಾಗ, ಕೃತಯುಗದಿಂದ ತ್ರೇತಾಯುಗ, ತ್ರೇತಾಯುಗದಿಂದ ದ್ವಾಪರಯುಗ, ದ್ವಾಪರಯುಗದಿಂದ ಕಲಿಯುಗ ಬರುವಷ್ಟರಲ್ಲಿ ಮಾಯ ಪ್ರಭಾವದಿಂದ ಶಿವರಾತ್ರಿಗೆ ಅರ್ಥವೆ ತಿಳಿಯದಹಾಗೆ ಹೋಗಿದೆ. ಶಿವರಾತ್ರಿ ಎಂದರೆ ಶಂಕರನನ್ನು ಪೂಜಿಸುವ ದಿನವಾಗಿ, ಓಂ ನಮಃಶಿವಾಯವು ಶಂಕರನ ನಿನಾದವೆಂದು ಎಲ್ಲರೂ ಭಾವಿಸಿಕೊಳ್ಳುತ್ತಿದ್ದಾರೆ. ಆದರೆ ಪರಮಾತ್ಮನನ್ನಾಗಲಿ, ಮೋಕ್ಷವನ್ನಾಗಲಿ ಯಾರೂ ಗುರುತು ಮಾಡಿಕೊಳ್ಳುತ್ತಿಲ್ಲ.

ರುದ್ರನೆಂದರೂ, ಶಂಕರನೆಂದರೂ ಇಬ್ಬರೂ ಒಂದೇ. ಶಂಕರನು, ನಾನು ಜ್ಞಾನಿ ಎನ್ನುವಂತೆ ಜ್ಞಾನಕ್ಕೆ ಚಿಹ್ನೆಯಾದ ಅರ್ಧಚಂದ್ರಕಾರವನ್ನು ತನ್ನ ತಲೆಮೇಲೆ ಇಟ್ಟುಕೊಂಡಿದ್ದಾನೆ. ಆತನಿಗೆ ಜ್ಞಾನ ತಿಳಿದಿರುವುದರಿಂದ ಯೋಗಕ್ಕೆ

ಬೇಕಾದ ಚರ್ಮವನ್ನು ಆಸನವಾಗಿ ಮಾಡಿಕೊಂಡು, ಯೋಗದಂಡವನ್ನು ಉಪಯೋಗಿಸುತ್ತಾ ದೇವರ ಕಡೆ ತನ್ನ ಮನಸ್ಸನ್ನು ಲಗ್ನ ಮಾಡುತ್ತಿದ್ದನು. ಈ ವಿಧವಾಗಿ ರುದ್ರನಾದ ಶಂಕರನು, ಈಶ್ವರನನ್ನು ಹೊಂದಬೇಕೆಂದು ಪ್ರಯತ್ನಿಸುತ್ತಿರುವಾಗ, ಆತನ ದಾರಿಯಲ್ಲಿ ನಾವು ಸಹ ನಡೆದು ಶಿವರಾತ್ರಿಯನ್ನು ನೈಜವಾದ ಅರ್ಥದಿಂದ ಆಚರಣೆ ಮಾಡಿಕೊಳ್ಳದೆ, ಶಿವರಾತ್ರಿಯನ್ನು ಶಂಕರನ ದಿನವಾಗಿ ಭಾವಿಸುವುದು ತಪ್ಪಲ್ಲವೆ? ಪೂರ್ವದಿಂದ ಇರುವ ಆಚಾರದ ಪ್ರಕಾರ ಈಶ್ವರ ಲಿಂಗವನ್ನು ಎದುರಿಗೆ ಇಟ್ಟುಕೊಂಡು ಅದನ್ನು ಶಂಕರನನ್ನಾಗಿ ತಿಳಿದುಕೊಳ್ಳುವುದು ತಪ್ಪಲ್ಲವೆ? ಸೃಷ್ಠಿ ರಹಸ್ಯವನ್ನು ತಿಳಿಸುವ ಲಿಂಗದ ಪಕ್ಕದಲ್ಲಿ ಪಾರ್ವತಿಯನ್ನು ಹೆಂಡತಿಯಾಗಿ, ನಂದಿಯನ್ನು ವಾಹನವಾಗಿ ಇಡುವುದು ತಪ್ಪಲ್ಲವೆ? ಇದಕ್ಕೆಲ್ಲ ಮೂಲ ಕಾರಣ ಅಜ್ಞಾನವೆ. ಕಟ್ಟುಕಥೆಗಳಿಂದ ಕೂಡಿಕೊಂಡ ಪುರಾಣಗಳನ್ನು ಕೆಲವರು ಪ್ರಚಾರ ಮಾಡುವುದರಿಂದ ಏರ್ಪಟ್ಟಿರುವ ಮೌಢ್ಯದಿಂದ, ವಿಶೇಷ ಅರ್ಥದಿಂದ  ನಮ್ಮಮುಂದೆಯೇ ಲಿಂಗ ಇದ್ದರೂ ಅದನ್ನು ಶಾಪದಿಂದ ಕಲ್ಲಾಗಿ ಬದಲಾಗಿಹೋದ ಶಂಕರನೆಂದುಕೊಳ್ಳುತ್ತಿದ್ದಾರೆ. ರೂಪವಿಲ್ಲದ ಲಿಂಗಕ್ಕೆ ಕೆಲವರು ಅಜ್ಞಾನದಿಂದ ತಿಳಿಯದೆ ಶಂಕರನ ಮುಖ ಆಕಾರವಿರುವನ್ನು ಅಂಟಿಸುತ್ತಿದ್ದಾರೆ.  ಲಿಂಗಕ್ಕೆ ಮುಖ ಆಕಾರವನ್ನು ಇಡುವುದರಿಂದ ಲಿಂಗವೊಂದರ ಅರ್ಥಕ್ಕೆ ಭಂಗ ಏರ್ಪಡುತ್ತಿದೆ. ಇಲ್ಲಿಯವರೆಗೂ ಎಷ್ಟೊ ಅಜ್ಞಾನದಿಂದ ಸೃಷ್ಠಿಗೆ ಮೂಲ ಕಾರಣವಾದ ದೇವರನ್ನು ಲಿಂಗಾಕಾರ ದಿಂದ ನೋಡದೆ ಶಂಕರನನ್ನಾಗಿ ತಿಳಿದಿದ್ದೇವೆ, ಈಗಿನಿಂದಾದರೂ ಈಶ್ವರನನ್ನು ಲಿಂಗವಾಗಿ, ಶಂಕರನನ್ನು ರುದ್ರಭೂಮಿಯಲ್ಲಿ ಸಂಚರಿಸುವ ರುದ್ರನನ್ನಾಗಿ ನೋಡಬೇಕು ಶಿವರಾತ್ರಿಯನ್ನು ಕರ್ಮನಾಶವಾದ ಮೋಕ್ಷರಾತ್ರಿ ಯಾಗಿ ನೋಡಬೇಕು.

ಪ್ರಸ್ತುತ ಕಾಲದಲ್ಲಿ ಶಿವರಾತ್ರಿ ದೇಶವ್ಯಾಪ್ತಿಯ ಹಬ್ಬವಾದರೂ ಒಂದು ಸ್ಥಳದಲ್ಲಾದರೂ ಪೂರ್ವದಲ್ಲಿರುವ ಸಂಪ್ರದಾಯದ ಭಾವಾರ್ಥವನ್ನನುಸರಿಸಿ ಯಾರೂ ನಡೆಯುತ್ತಿಲ್ಲ. ಪೂರ್ವದಲ್ಲಿ ಇಂದೂ (ಹಿಂದೂ) ತ್ವವು ಅಪಾರ

ಜ್ಞಾನದಿಂದ ಮುಡಿಪಟ್ಟಿರುತ್ತಿತ್ತು. ಈ ದಿನ ಇಂದೂತ್ವ ರಾಜಕೀಯದಿಂದ ಮುಡಿಪಟ್ಟಿದೆ. ದೈವಜ್ಞಾನವಿಲ್ಲದ ರಾಜಕೀಯ ಹಿಂದೂತ್ವದ ಮುಸುಗು ಹಾಕಿಕೊಂಡು ನಮ್ಮಂತಹವರನ್ನು ಸಹ ಆತ್ಮಜ್ಞಾನವನ್ನು ಹೇಳದಹಾಗೆ ಅಡ್ಡಗಟ್ಟುತ್ತಿದೆ. ಮನುಷ್ಯರು ನಡೆಯುವ ಅಜ್ಞಾನಮಾರ್ಗವನ್ನು ಖಂಡಿಸಿ ಜ್ಞಾನ ಮಾರ್ಗವನ್ನು ಬೋಧಿಸುವುದು ನಮ್ಮಧ್ಯೇಯ. ಹಿಂದೂಗಳು ದೈವಮಾರ್ಗದಲ್ಲಿ ಸರಿಯಾಗಿ ಇಲ್ಲದ್ದರಿಂದಲೇ ನೀವು ಇಲ್ಲಿ ಅಜ್ಞಾನವಾಗಿ ನಡೆಯುತ್ತಿದ್ದೀರ. ದೇವರು ಹೇಳಿದ ಭಗವದ್ಗೀತೆ ಗ್ರಂಥಕ್ಕೆ ವಿರುದ್ಧವಾಗಿ ನಡೆಯುತ್ತಿದ್ದೀರೆಂದು ಹೇಳುವುದು ನಮ್ಮ ಕರ್ತವ್ಯ. ಎಷ್ಟೋಜನ ವೇದಾಂತಿಗಳು ಸಹ ಜ್ಞಾನಕ್ಕೆ ವಿರುದ್ಧವಾಗಿ ನಡೆಯುತ್ತಿದ್ದರೆ, ನಾವು ಅವರಿಗೂ ಸಹ ವೇದಗಳು ಪ್ರಕೃತಿ ಜನಿತಗಳೆಂದು ದೈವಜನಿತ ಭವಗದ್ಗೀತೆ ಎಲ್ಲರ ಆಚರಣೆಗೆ ಯೋಗ್ಯವಾದುದೆಂದು, ಅದೇ ನಿಜವಾದ ಜ್ಞಾನವೆಂದು ಒತ್ತಿ ಹೇಳಿದ್ದೇವೆ. ಹಾಗೆಯೇ ಹಿಂದೂಗಳಾಗಿ ಸಹ ಭಗವದ್ಗೀತೆ ಪ್ರಕಾರ ನಡೆಯದವರಿಗೆ ಪೂರ್ವದಲ್ಲಿ ಹಿರಿಯರು ಏನು ಹೇಳಿದ್ದಾರೆ ಒಮ್ಮೆ ನೋಡಿರೆಂದು ಸೂಕ್ತವಾದ ಜ್ಞಾನವನ್ನು ತಿಳಿಸುತ್ತಿದ್ದೇವೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರವೂ, ನಮ್ಮ ಜಾತಕದ ಪ್ರಕಾರವೂ ಭೂಮಿಮೇಲೆ ನಾವು ಮಾಡಬೇಕಾದ ಕೆಲಸ ಜನರಿಗೆ ತಿಳಿಯದೆ ಹುದುಗಿಹೋಗಿರುವ ಜ್ಞಾನವನ್ನು ಹೇಳುವುದೆ. ನಾವು ಶಾಸ್ತ್ರಬದ್ಧವಾಗಿ, ಪುರಾಣರಹಿತವಾಗಿ ಜ್ಞಾನವನ್ನು ತಿಳಿಸುತ್ತಿದ್ದರೆ. ಎಷ್ಟೋ ತಿಳಿಯದ ದೈವ ರಹಸ್ಯಗಳು ಇವರ ಮೂಲಕ ತಿಳಿಯುತ್ತಿ ವೆಂದು ಸಂತೋಷಪಡದೆ ನಮ್ಮನ್ನು ಜ್ಞಾನ ಹೇಳಬೇಡವೆಂದು ಬೆದರಿಸುವ ಹಿಂದೂಗಳಿದ್ದಾರೆಂದರೆ, ಹಿಂದೂಗಳು ಇನ್ನೂ ಎಷ್ಟು ಅಜ್ಞಾನದಲ್ಲಿ ಸಿಕ್ಕಿಹಾಕಿಕೊಂಡಿದ್ದಾರೆಂಬುದು ಅರ್ಥವಾಗುತ್ತಿದೆ. ನಾನು ಇಂದೂ (ಹಿಂದೂ) ವಾಗಿ ಹುಟ್ಟಿದಕ್ಕೆ, ಹಿಂದೂಗಳಿಗೆ ಸಂಪೂರ್ಣ ಜ್ಞಾನವನ್ನು ಒದಗಿಸಬೇಕೆಂಬುದೇ ನಮ್ಮ ಉದ್ದೇಶ. ಆ ಪ್ರಯತ್ನ ಒಳಗಿನ ಆತ್ಮ ಮಾಡಿಸುತ್ತಾ ಇದ್ದರೆ ನಾನು ಮಾಡುತ್ತಿರುತ್ತೇನೆ. ಅಂದರೆ ನಾವು ಜ್ಞಾನವನ್ನು ಬೋಧಿಸುತ್ತಲೇ ಇರುತ್ತೇವೆ.

ಶಿವಾರಾತ್ರಿ ಕರ್ಮನಿರ್ಮೂಲನೆಗೆ, ಮೋಕ್ಷಪ್ರಾಪ್ತಿಗೆ ಗುರುತು ಆಗಬೇಕು. ಆದರೆ ಕರ್ಮ ಸಂಪಾದನೆಗೆ ಗುರುತು ಆಗಬಾರದು. ಈಗಿನ ಕಾಲದಲ್ಲಿ ಶಿವರಾತ್ರಿ ದಿನದಂದು ಕೆಲವರು ಜಾಗರಣೆ ಎನ್ನುವ ಹೆಸರಿನಿಂದ ರಾತ್ರಿಸಮಯ ಮಲಗದೆ ಎದ್ದಿರುತ್ತಿದ್ದಾರೆ. ಆ ದಿನ ಎದ್ದಿರಬೇಕೆಂದು ತಿಳಿದಿದೆ, ಆದರೆ ಏಕೆ ಎದ್ದಿರಬೇಕು? ಎದ್ದು ಏನು ಮಾಡಬೇಕೆಂದು ತಿಳಿಯದು. ಶಿವರಾತ್ರಿ ದಿನದಂದು ರಾತ್ರಿ ಸಿನಿಮಾಗಳು, ತಿರುಗಾಟಗಳು (ಷಿಕಾರುಗಳು), ಕುಡಿಯುವುದು, ವೇಶ್ಯರೊಂದಿಗೆ ಕಳೆಯುವುದು ಮಾಡುತ್ತಿದ್ದಾರೆ. ಕೆಲವರಾದರೆ ಗರ್ಲ್‌ಫ್ರೆಂಡ್ ಜೊತೆ ಎಂಜಾಯ್ ಮಾಡಿದ್ದೇನೆಂದು ಗರ್ವವಾಗಿ ಹೇಳಿಕೊಳ್ಳುತ್ತಿದ್ದಾರೆ. ಈ ವಿಧವಾಗಿ ಈಗಿನ ಸಮಾಜದಲ್ಲಿ ಯುವಜನ ಬದಲಾಗಿಹೋಗುತ್ತಿರುವಾಗ, ಹಿರಿಯರು ಏನು ತಲೆಕೆಡಿಸಿಕೊಳ್ಳದೆ ಇದ್ದಾರೆ. ಎಷ್ಟು ಪಾಪಗಳು ಮಾಡಿದರೂ ಸಾವಿರಾರು ರೂಪಾಯಿಗಳು ಖರ್ಚುಮಾಡಿ ಶಿವನಿಗೆ ಅಭಿಷೇಕ ಮಾಡಿದ್ದೇವೇಳು ಅವೇ ಹೋಗುತ್ತವೆ ಅನ್ನುತ್ತಿದ್ದಾರೆ. ಪೂಜೆಗಳು ಮಾಡುವ ಪಂಡಿತರು ಸಹ ಪಾಪಪರಿಹಾರಾರ್ಥ ಪೂಜೆಗಳಿವೆ ಎನ್ನುತ್ತಿದ್ದಾರೆ. ಅದರಿಂದ ಪಾಪವೊಂದರ ಭಯ ಭೀತಿ ಯಾರಿಗೂ ಇಲ್ಲದಹಾಗೆ ಹೋಗಿ ಹಣ ಖರ್ಚಿಟ್ಟು ಪೂಜೆಗಳೊ, ಅಭಿಷೇಕಗಳೂ ಮಾಡಿದರೆ ಪಾಪ ಹೋಗುತ್ತದೆಂಬ ಭಾವನೆ ಎಲ್ಲರಲ್ಲಿಯೂ ಬೇರೂರಿ ಹೋಗಿದೆ. ಆದ್ದರಿಂದ ಶಿವರಾತ್ರಿ ದಿನದಂದು ಸಹ ಆ ಹಬ್ಬ ಜಾಲಿಗೋಸ್ಕರವೆ ಎನ್ನುವಂತೆ ಮಾಡುತ್ತಿದ್ದಾರೆ. ಸಂಪ್ರದಾಯದ ಪ್ರಕಾರ ಹಬ್ಬದ ದಿನ, ಕಳೆದ ಕಾಲವನ್ನು ಕುರಿತು ಯೋಚಿಸಿ, ನಾನು ಎಷ್ಟು ಜ್ಞಾನ ತಿಳಿದು ಕೊಂಡಿದ್ದೇನೆ, ಸಂಪಾದಿಸಿದ್ದೇನೆಂದು ಲೆಕ್ಕ ನೋಡಿಕೊಳ್ಳಬೇಕಾಗಿರುತ್ತದೆ. ಕರ್ಮ ವನ್ನು ಕಳೆದುಕೊಳ್ಳುವುದಕ್ಕೆ ಅವಶ್ಯವಾದ ಜ್ಞಾನವನ್ನು ಹುಡಿಕಿಕೊಳ್ಳಬೇ ಕಾಗಿದೆ. ತಾವು ಮಾಯೆಯಿಂದ ಜ್ಞಾನದ ಕಡೆ ಜಾಗೃತಿಯಾಗುತ್ತಾ ಜೊತೆಯವ ರನ್ನು ಸಹ ಜಾಗ್ರತೆ ಮಾಡಬೇಕಾದ ದಿನವಾದ್ದರಿಂದ **'ಶಿವರಾತ್ರಿ ಜಾಗರಣೆ'** ಎಂದು ಆ ರಾತ್ರಿಯನ್ನು ಕರೆದಿದ್ದಾರೆ. ಅಷ್ಟೆಯಾಗಲಿ ನಿದ್ರೆಹೋಗದಂತೆ ಎದ್ದಿರುವುದು ಜಾಗರಣೆ ಅಲ್ಲವೆಂದು ತಿಳಿಯಬೇಕು.

ಓದು ಬಾರದ ಪಾಮರರು ಏನಾದರೂ ಇತರರನ್ನು ಅನುಸರಿಸಿ ಹಬ್ಬ ಮಾಡುತ್ತಿದ್ದಾರೆಂದರೆ ಒಪ್ಪಿಕೊಳ್ಳಬಹುದು. ಆದರೆ ವಿದ್ಯಾಪಂಡಿತರು, ವಿಜ್ಞಾನವಂತರು ಇತರರು ಮಾಡುತ್ತಿರುವುದನ್ನು ವಿವರವಾಗಿ ತಿಳಿದುಕೊಳ್ಳದೆ ಕುರುಡರಂತೆ ಆಚರಣೆ ಮಾಡುತ್ತಿದ್ದರೆಂದರೆ ಅದಕ್ಕೆ ಅರ್ಥವೆ ಇಲ್ಲ. ಶಿವರಾತ್ರಿ ಒಂದರ ವಿಷಯದಲ್ಲಾಗಲಿ, ಮತ್ತೆ ಬೇರೆ ಹಬ್ಬಗಳ ವಿಷಯದಲ್ಲಾಗಲಿ ಸ್ವಲ್ಪವೂ ವಿವರ ಕೇಳದೆ, ಕನಿಷ್ಟ ತಿಳಿದುಕೊಳ್ಳೋಣವೆಂಬ ಪ್ರಯತ್ನವೂ ಮಾಡದೆ, ಕುರುಡರಂತೆ ಆಚರಣೆ ಮಾಡುತ್ತಾ ಹೋಗುತ್ತಿರುವುದರಿಂದ, ಹೇತುವಾದಿಗಳು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದೆ ಹೋಗುತ್ತಿದ್ದಾರೆ. ವಿದ್ಯಾವಂತರು ಸಹ ಸರಿಯಾದ ಉತ್ತರ ಹೇಳಲಾರದೆ ಹೋಗುವುದರಿಂದ, ಇದೆಲ್ಲವೂ ಮೂಢಭಕ್ತಿ, ಮೂಢ ನಂಬಿಕೆಯೆಂದು ಹೇತುವಾದಿಗಳು ಸಹ ದೇವರೆ ಇಲ್ಲವೆನ್ನುತ್ತಿದ್ದಾರೆ. ಈಗ ಜ್ಞಾನವೆಂದರೆ ಏನೆಂದು ಸ್ವಲ್ಪ ಯೋಚಿಸುವವರಿಗೆ, ಇಲ್ಲಿ ಉತ್ತರ ಸಿಗದ ಕೆಲವರು ಪರಮತವನ್ನು ಆಶ್ರಯಿಸುತ್ತಿದ್ದರೆ, ಕೆಲವರು ನಾಸ್ತಿಕವಾದಿಗಳಾಗಿ ಬದಲಾಗಿಹೋಗುತ್ತಿ ದ್ದಾರೆ. ಪ್ರಜಾ ವಿಜ್ಞಾನ ವೇದಿಕೆಗಳೆಂಬ ಹೆಸರಿನಿಂದ ದೇವರೆ ಇಲ್ಲವೆಂದು, ಭಗವದ್ಗೀತೆ ಒಂದು ಬೂಟಕವೆಂದು, ಜ್ಞಾನವನ್ನು ಹೇಳುವವರೆಲ್ಲಾ ಮೋಸಗಾರರೆಂದು ಕೆಲವರೆನ್ನುತ್ತಿದ್ದಾರೆ. ನಮ್ಮಂತ ಹವರು ಜ್ಞಾನವನ್ನು ಹೇಳುತ್ತಿದ್ದರೆ ಅರ್ಥವಾಗದೆ ನಿಮ್ಮದು ಹಿಂದೂಮತಕ್ಕೆ ವಿರುದ್ಧವಾದ ಜ್ಞಾನವೆಂದು ಹುರಿದುಬೀಳುವ ಕೆಲವು ಸಂಸ್ಥೆಗಳಿಗೆ ಇಂತಹ ಹೇತುವಾದಿಗಳು, ವಿಜ್ಞಾನ ವೇದಿಕೆಗಳು ಕಾಣಿಸಲಿಲ್ಲವಾ? ಈಗಲಾದರೂ ನಾವು ಹಿಂದೂಗಳೆಂದು ರಾಜಕೀಯ ಬಣ್ಣ ಬಳಿದುಕೊಳ್ಳದೆ, ಎಚ್ಚರಗೊಂಡು ಅಜ್ಞಾನದಲ್ಲಿ ಮುಳುಗಿಹೋಗುತ್ತಿರುವ ಹಿಂದೂಗಳನ್ನು ಕಾಪಾಡಬೇಕೆಂದು ಮನವಿ ಮಾಡುತ್ತಿದ್ದೇವೆ. ಮೊದಲು ನೀನು ಜ್ಞಾನ ತಿಳಿದುಕೊ! ನಂತರ ಪಕ್ಕದವನಿಗೆ ಜ್ಞಾನ ಹೇಳು, ಹಾಗಾದರೇನೆ ನಾವು ಚೆನ್ನಾಗಿರುತ್ತೇವೆ, ನಮ್ಮ ಸಂಸ್ಕೃತಿಯಲ್ಲಿನ ಹಬ್ಬಗಳೂ ಮೆರಗುಗೊಳ್ಳುತ್ತವೆ.

# ಶ್ರೀರಾಮ ನವಮಿ

ತ್ರೇತಾಯುಗದಲ್ಲಿ ದಶರಥಮಹಾರಾಜನಿಗೆ ಕುಮಾರನಾಗಿ ರಾಮನು ಹುಟ್ಟಿದ್ದಾನೆ. ಆ ದಿನ ಗ್ರಹಚಾರವನ್ನನುಸರಿಸಿಯೊ ಅಥವಾ ಮಹರ್ಷಿಗಳ ಮಾತನ್ನನುಸರಿಸಿಯೊ "ರಾಮ" ಎನ್ನುವ ಎರಡಕ್ಷರಗಳ ಹೆಸರು ದಶರಥ ಪುತ್ರನಿಗೆ ಇಟ್ಟಿದ್ದಾರೆ. ಆ ಹೆಸರಿಗೆ ಮುಂದೆ ಗೌರವಪ್ರದವಾಗಿ, ಶುಭಪ್ರದವಾಗಿ "ಶ್ರೀ" ಎಂಬ ಅಕ್ಷರವನ್ನು ಸೇರಿಸಿ "ಶ್ರೀರಾಮ" ಎಂದು ಕೆಲವರಂದಿದ್ದಾರೆ. ಶ್ರೀ ಎನ್ನುವುದು ಮಧ್ಯದಲ್ಲಿ ಗೌರವಕ್ಕೆ ಸೇರಿಸಿರುವುದೆ ಹೊರತು ಮೂಲ ಹೆಸರಿನಲ್ಲಿರುವುದು ಅಲ್ಲವೆಂದು, ರಾಮ ಎನ್ನುವ ಎರಡಕ್ಷರಗಳ ಹೆಸರೆ ನೈಜವಾದ ಹೆಸರೆಂದು ತಿಳಿಯಬೇಕು. ರಾಮ ಎನ್ನುವ ಎರಡಕ್ಷರಗಳ ಹೆಸರು ಬಹಳ ದೊಡ್ಡ ಅರ್ಥಕೊಡುವುದಾಗಿದೆ. ಆದ್ದರಿಂದ ಕೆಲವರು ಜ್ಞಾನವನ್ನು ತಿಳಿದ ಹಿರಿಯರು ರಾಮ ಎನ್ನುವ ಪದವನ್ನು ಆಗಾಗ ನುಡಿಯಿರಿ ಎಂದು ಹೇಳುತ್ತಿದ್ದರು. ಹಿರಿಯರು ಹೇಳಿರುವುದರಿಂದ ಕೆಲವರು ಕುಳಿತುಕೊಂಡಾಗ, ಎದ್ದಾಗ ರಾಮ ಎಂದು ಹೇಳುವುದನ್ನು ಅಭ್ಯಾಸ ಮಾಡಿಕೊಂಡಿದ್ದರು. ಪೂರ್ವದಲ್ಲಿ ಹಾಗೆ ರಾಮ ಶಬ್ಧವನ್ನು ಬಹಳಜನ ಹೇಳುತ್ತಿದ್ದರು. ನವೀನಕಾಲದಲ್ಲಿ ಓದುಗಳು ಹೆಚ್ಚಾಗಿ ವಿಜ್ಞಾನ ಬೆಳೆದಂತೆಲ್ಲ ಪೂರ್ವಕಾಲದಲ್ಲಿ ರಾಮ ಎನ್ನುವಂತೆ ಈಗ ಯಾರೂ ಅನ್ನುತ್ತಿಲ್ಲ. ಇದರಲ್ಲಿ ವಿಶೇಷವೇನೆಂದರೆ ಪೂರ್ವಕಾಲದ ಪದ್ಧತಿ ಪ್ರಕಾರ ಯಾರಾದರೂ ಎನ್ನುವವರು ಇದ್ದರೂ, ಅವರು ರಾಮ ಎಂದು ಎರಡಕ್ಷರಗಳನ್ನೆ ನುಡಿಯುತ್ತಿದ್ದಾರೆ. ಆದರೆ ಶ್ರೀ ರಾಮ ಎಂದು ಮೂರಕ್ಷರಗಳ ಪದವನ್ನು ಹೇಳುವುದಿಲ್ಲ. ಉತ್ತರ ಭಾರತದೇಶದಲ್ಲಿ ಬಹಳಜನ ಈಗಿನ ಕಾಲದಲ್ಲಿಯೂ ಸಹ ಒಬ್ಬರಿಗೊಬ್ಬರು ಪರಿಚಯ ಇರುವವರು ಎಲ್ಲಿಯಾದರೂ ಎದುರಾದರೆ ರಾಮ್‌ರಾಮ್ ಎಂದು ಕರೆದುಕೊಳ್ಳುವುದನ್ನು ನೋಡಬಹುದು. ಎದುರಿಗೆ ಬರುವ ವ್ಯಕ್ತಿಗೆ ಗೌರವವಾಗಿ ನಮಸ್ತೆ ಎಂದು ಹೇಳುವುದಕ್ಕೆ ಬದುಲು ರಾಮ್‌ರಾಮ್ ಎನ್ನುವುದಿದೆ. ರಾಜಸ್ಥಾನ್ ಗುಜರಾತ್ ರಾಜ್ಯಗಳಲ್ಲಿನ ಪ್ರಜೆಗಳಲ್ಲಿ ರಾಮ್‌ರಾಮ್ ಎನ್ನುವ ಅಭ್ಯಾಸ ಪೂರ್ತಿಯಾಗಿ ಕಾಣಿಸುತ್ತಿದೆ. ಪೂರ್ವದಿಂದ

ಅಂತಹ ಒಳ್ಳೆಯಪದ್ಧತಿಯನ್ನು ನಮ್ಮ ಹಿರಿಯರು ನಮಗೆ ಅಭ್ಯಾಸ ಮಾಡಿದ್ದಾರೆ. **'ರಾಮ'** ಎನ್ನುವ ಪದದಲ್ಲಿನ ವಿಶಿಷ್ಟತೆ ಅಂಥಹದ್ದು. ಕಬಿರ್‌ದಾಸ್ ಮೊದಲಾದ ಜ್ಞಾನಿಗಳು ಸಹ ರಾಮ ಶಬ್ಧವನ್ನು ಬಿಡದೆ ಸ್ಮರಿಸುತ್ತಿದ್ದರು.

ಈಗಿನಕಾಲದಲ್ಲಿ ಕೆಲವರು ಹೇತುವಾದಿಗಳು ರಾಮನಲ್ಲಿ ಏನು ದೊಡ್ಡತನ ಇದೆಯೆಂದು ಪ್ರಶ್ನಿಸುತ್ತಿದ್ದಾರೆ. ರಾಮನು ದಶರಥ ಪುತ್ರನಾಗಿ ಹುಟ್ಟಿ ಆಸ್ತಿತಗಾದೆಗಳಲ್ಲಿ ಅರಣ್ಯಕ್ಕೆ ಹೋಗಿ ಅನೇಕ ಕಷ್ಟಗಳನ್ನು ಪಟ್ಟಿದ್ದಾನೆ. ಸೀತೆಯನ್ನು ಕಳೆದುಕೊಂಡು ಜಾಡು (ಸುಳಿವು) ತಿಳಿಯದೆ ಕೆಲವು ಸಂದರ್ಭಗಳಲ್ಲಿ ರೋದಿಸಿದ್ದಾನೆ. ಸಾಮಾಜಿಕ ನ್ಯಾಯವನ್ನು ಸಹ ಆಚರಿಸದೆ ಹೆಂಡತಿಯನ್ನು ಅದೂ ಗರ್ಭಿಣಿ ಸ್ತ್ರೀಯನ್ನು ಅರಣ್ಯಕ್ಕೆ ಕಳುಹಿಸಿದನು. ತಂದೆ ಎಂದು ತಿಳಿಯದ ಮೊದಲು ರಾಮನನ್ನು ಸ್ವಂತ ಮಕ್ಕಳೆ ನಿಂದಿಸಿದ್ದಾರೆ. ಪತಿಯಾದ ರಾಮನು ಸೀತೆಯನ್ನು ಪುನಃ ಮನೆಗೆ ಕರೆದರೆ ಪತ್ನಿ ನಿರಾಕರಿಸಿದ್ದಾಳೆ. ಆತನ ಸ್ವಂತ ಜೀವನದಲ್ಲಿ ಎಷ್ಟೋ ಕಷ್ಟಗಳನ್ನು ಎದುರಿಸಿದ ರಾಮನು ಯಾವುದರಲ್ಲಿ ಉತ್ತಮನು? ಆತನಿಗೇ ಇಲ್ಲದ ವಿಶಿಷ್ಟತೆ ಆತನ ಹೆಸರಿಗೆ ಹೇಗೆ ಬಂದಿದೆ? ಎಂದು ಕೆಲವರು ಹೇತುವಾದಿಗಳು ಪ್ರಶ್ನಿಸುತ್ತಿದ್ದಾರೆ. ಜೀವನದಲ್ಲಿ ಒಂದು ವರ್ಷವೂ ಸಹ  ಒಟ್ಟಾಗಿ ಸಂಸಾರ ಮಾಡದವರು ಆದರ್ಶ ದಂಪತಿಗಳಾ? ಶೀಲವತಿಯಾದ ಪತ್ನಿಯನ್ನು ಅನುಮಾನಿಸಿ ಅರಣ್ಯಕ್ಕೆ ಕಳಿಸಿದವನು ಶ್ರೇಷ್ಠನಾ? ಆತನು ದೇವರೆ ಅಲ್ಲ ಎನ್ನುವ ನಾಸ್ತಿಕರು ಸಹ ಇದ್ದಾರೆ. ಅಷ್ಟೇಯಲ್ಲದೆ ಆ ರಾಮನಿಗಿಂತ ನಮ್ಮ ರಾವಣನೆ ದೊಡ್ಡವನು ಎನ್ನುವ ದಕ್ಷಿಣದೇಶದ ದ್ರಾವಿಡರು ಇದ್ದಾರೆ. ಇಂತಹವರಿಗೆಲ್ಲ ನಾವು ಉತ್ತರ ಹೇಳಲಾರೆವು. ಏಕೆಂದರೆ! ಹೇಳಿದರೂ ಪೂರ್ತಿ ಕೇಳದೆಯೇ ಅಡ್ಡ ಮಾತು ಮಾತನಾಡುವವರಿಗೆ ಯಾರೂ ಉತ್ತರ ಹೇಳಲಾರರು.

ಪ್ರತಿ ಮನುಷ್ಯನಲ್ಲೂ ಮತ್ತೊಬ್ಬರನ್ನು ಕುರಿತು ಹೇಳುವುದರಲ್ಲಿ ಮೂರು ಭಾವಗಳು ಇರುತ್ತವೆ. ಈ ಮೂರನ್ನು ಪ್ರಪಂಚ ಭಾವನೆಗಳೆನ್ನುತ್ತೇವೆ. ಅವುಗಳಲ್ಲಿ ಒಂದು ತಟಸ್ಥ ಭಾವನೆ, ಎರಡು ವಿಮರ್ಶೆ ಭಾವನೆ, ಮೂರು ವಿಶ್ವಾಸ

ಭಾವನೆ. ಈ ಮೂರು ಭಾವಗಳ ಪ್ರಕಾರ ಯಾವ ಮನುಷ್ಯನಾದರು ಮತ್ತೊಬ್ಬ ಮನುಷ್ಯನನ್ನು ಲೆಕ್ಕಿಸುತ್ತಿರುತ್ತಾನೆ. ಹಾಗೆಯೇ ರಾಮನನ್ನಾಗಲಿ, ಕೃಷ್ಣನನ್ನಾಗಲಿ ಮಿಮರ್ಶಿಸುವವರು ಇದ್ದಾರೆ, ವಿಶ್ವಾಸಿಸುವವರೂ ಇದ್ದಾರೆ. ಮತ್ತೆ ಕೆಲವರು ಆಕಡೆ ವಿಮರ್ಶಿಸುವುದಾಗಲಿ, ಈಕಡೆ ವಿಶ್ವಾಸಿಸುವುದಾಗಲಿ ಏನೂ ಮಾಡದೆ, ಏನೂ ಮಾತನಾಡದೆ ತಟಸ್ಥವಾಗಿರುವವರು ಇದ್ದಾರೆ. ಯಾರ ಭಾವನೆ ಅವರಿಗೆ ದೊಡ್ಡದಾಗಿರುತ್ತದೆ. ಆದ್ದರಿಂದ ನಮ್ಮ ಭಾವನೆ ಅವರಿಗೆ ಇಷ್ಟವಾಗ ಬಹುದು, ಇಷ್ಟವಿಲ್ಲದಿರಬಹುದು. ಆದ್ದರಿಂದ ನಾನು ಪ್ರಪಂಚ ಪದ್ಧತಿಯಲ್ಲಿರುವ ಈ ಮೂರು ಭಾವನೆಗಳ ಪ್ರಕಾರ ಏನು ಹೇಳದೆ, ಈ ಮೂರು ಭಾವನೆಗಳಿಗೆ ಅತೀತವಾಗಿರುವ ಆಧ್ಯಾತ್ಮಿಕ ಭಾವನೆ ಪ್ರಕಾರ ಹೇಳಬೇಕೆಂದುಕೊಂಡಿದ್ದೇನೆ. ಹಾಗೆ ಏಕೆ ಹೇಳಬೇಕೆಂದುಕೊಂಡಿದ್ದೇವೆ ಎಂದರೆ! ಆಧ್ಯಾತ್ಮಿಕ ಭಾವನೆಯಲ್ಲಿ ವಿಮರ್ಶೆಯಾಗಲಿ, ವಿಶ್ವಾಸವಾಗಲಿ, ತಟಸ್ಥವಾಗಾಗಲಿ ಇರುವುದಿಲ್ಲ. ಆಧ್ಯಾತ್ಮಿಕ ಭಾವ ಎಲ್ಲರಿಗೂ ಸಮಾನವಾಗಿ ಇರುತ್ತದೆ. ಈ ಭಾವನೆ ಎಲ್ಲರಿಗೂ ಸಂಬಂಧಿಸಿರುವುದಾಗಿ, ಎಲ್ಲರಲ್ಲಿ ಸಮಾನವಾಗಿರುವುದರಿಂದ ಶ್ರದ್ಧೆ ಇರುವವರಿಗೆ ಅರ್ಥವಾಗುತ್ತದೆ. ಶ್ರದ್ಧೆ ಇಲ್ಲದವರಿಗೆ ಅರ್ಥವಾಗುವುದಿಲ್ಲ. ಈಗ ನಾವು ಹೇಳುವ ಆಧ್ಯಾತ್ಮಿಕ ಭಾವವನ್ನು ಶ್ರದ್ಧೆಯಿಂದಿ ಎಲ್ಲರೂ ಅರ್ಥ ಮಾಡಿಕೊಳ್ಳುತ್ತಾರೆಂಬ ಉದ್ದೇಶದಿಂದ ತಿಳಿಸುತ್ತಿದ್ದೇವೆ ಶ್ರದ್ಧೆಯಿಂದ ತಿಳಿಯಿರಿ.

ದಶರಥ ಪುತ್ರನಾದ ಶ್ರೀರಾಮನ ಬಗ್ಗೆ ವಿಶ್ವಾಸ ಇರುವ ರಾಮನ ಭಕ್ತರಿಗೆ, ವಿಶ್ವಾಸವಿಲ್ಲದ ನಾಸ್ತಿಕ, ಹೇತುವಾದಿಗಳಿಗೆ ತಿಳಿಯದ ರಹಸ್ಯವೊಂದು ಇದೆ. ಅದೇನೆಂದರೆ! ತ್ರೇತಾಯುಗದಲ್ಲಿನ ದಶರಥ ರಾಮನಿಗಿಂತ ಮೊದಲೆ ಕೃತಯುಗದಲ್ಲಿಯೆ **"ರಾಮ"** ಎನ್ನುವ ಎರಡಕ್ಷರಗಳ ಪದ ಇದೆ. ಶ್ರೀರಾಮನಿಗಿಂತ ಮೊದಲೆ 'ರಾಮ' ಎನ್ನುವ ಹೆಸರಿರುವುದು ಆಶ್ಚರ್ಯವೆ ಅಲ್ಲವೆ! ಈಗ ಆ ಆಶ್ಚರ್ಯಕರವಾದ ವಿಷಯವನ್ನು ಕುರಿತು ತಿಳಿದುಕೊಳ್ಳೋಣ 'ರಾಮ' ಎನ್ನುವ ಎರಡಕ್ಷರಗಳ ಶಬ್ಧವನ್ನು ಪ್ರಜೆಗಳಿಗೆ ಕೃತಯುಗದಲ್ಲಿನ ಜ್ಞಾನಿಗಳೆ ಪರಿಚಯ ಮಾಡಿದ್ದಾರೆ. ರಾಮನು ಹುಟ್ಟಿದ ಆ ಕಾಲದಲ್ಲಿ 'ರಾಮ' ಎನ್ನುವ ಎರಡಕ್ಷರಗಳಿಗೆ

ಆಧ್ಯಾತ್ಮಿಕರೀತ್ಯಾ ವಿಶೇಷವಾದ ಅರ್ಥ ಇರುತ್ತಿತ್ತು. 'ರ' ಎನ್ನುವದರ ಅರ್ಥ ನಾಶ ಎಂದು ಮೊದಲೆ ತಿಳಿದುಕೊಂಡಿದ್ದೇವೆ. 'ರ' ಎಂದರೂ 'ರಾ' ಎಂದರೂ ಎರಡು ಒಂದೇ ಅರ್ಥ ಕೊಡುತ್ತಿವೆಯೆಂದು ದಶರಾ ಹಬ್ಬವನ್ನು ಕುರಿತು ಹೇಳಿಕೊಂಡಾಗಲೇ ತಿಳಿದುಕೊಂಡಿದ್ದೇವೆ. 'ಮ' ಎಂದರೆ ನಾನು ಇಲ್ಲವೆ ನಾ ಎಂಬ ಅರ್ಥ ಇರುವುದೆಂದು ಮಮ ಎಂದರೆ ನನ್ನೊಂದರ ಎಂದು **"ಸುಬೋಧ"** ಗ್ರಂಥದಲ್ಲಿ 'ಮಾಮ' ನನ್ನು ಕುರಿತು ಹೇಳಿಕೊಂಡಾಗ ತಿಳಿದುಕೊಂಡಿದ್ದೇವೆ. ಆ ಪ್ರಕಾರ ನೋಡಿದರೆ ರಾಮ ಎನ್ನುವ ಮಾತಿನಲ್ಲಿ ನಾ ಎನ್ನುವುದು ನಾಶ ಆಗಬೇಕೆಂದು ಅರ್ಥ ಇದೆ. ನಾನು ಎನ್ನುವವನಾದ ಜೀವಿಯು ನಾಶವಾಗಿ ಹೋಗಬೇಕೆಂಬ ಅರ್ಥವು ಆ ಎರಡಕ್ಷರಗಳ ಶಬ್ದದಲ್ಲಿದೆ. ಜೀವಿಯು ನಾಶವಾದರೆ ದೇವರಾಗಿ ಬದಲಾಗಿಹೋಗುತ್ತಾನೆ. ಅಂದರೆ ದೇವರಲ್ಲಿ ಬೆರೆತುಹೋಗುತ್ತಾನೆ. ಒಬ್ಬ ಜೀವಿಯು ಜನ್ಮರಾಹಿತ್ಯವನ್ನು ಕೋರಿಕೊಳ್ಳುತ್ತಾ ದೇವರಲ್ಲಿ ಐಕ್ಯವಾಗುವ ಅರ್ಥ. **"ರಾಮ"** ಎಂಬ ಶಬ್ಧದಲ್ಲಿ ಅಡಕವಾಗಿದೆ. ಬ್ರಹ್ಮಜ್ಞಾನದ ಪ್ರಕಾರ ಪ್ರತಿ ಜೀವಿಯು ದೇವರಲ್ಲಿ ಐಕ್ಯವಾಗುವಂತೆ ಕೋರಿ ಕೊಳ್ಳಬೇಕು. ಆ ವಿಧವಾಗಿಯೇ ಪ್ರವರ್ತಿಸಬೇಕು. ಜೀವಿಯು ಎಂದಿಗಾದರೂ ದೇವರಲ್ಲಿ ಸೇರಿಹೋಗಬೇಕಾಗಿರುವವನೆ. ಜೀವಿ ಎಂಬ ಮಾತು ಇಲ್ಲದಹಾಗೆ ಹೋಗಿ ದೇವರೆಂಬ ಮಾತಾಗಿ ಬದಲಾವಣೆ ಹೊಂದಬೇಕಾಗಿದ್ದೆ. ಆದ್ದರಿಂದ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಎಂಬ ಅಧ್ಯಾಯದಲ್ಲಿ ಜೀವಿಯನ್ನು ಕ್ಷರನು ಎಂದಿದ್ದಾರೆ. ಕ್ಷರನು ಎಂದರೆ ನಾಶವಾಗುವವನೆಂದು ಅರ್ಥ. "ನಾಶ ವಾಗುವವನು ನಾನು" ಎಂಬ ಜ್ಞಾಪಕವನ್ನು ಯಾವಾಗಲೂ ಮನುಷ್ಯ ಮರೆತುಹೋಗದಂತೆ "ರಾಮ" ಎಂಬ ಮಾತನ್ನು ಸಂದರ್ಭದಲ್ಲಾಗಲಿ, ಅಸಂದರ್ಭದಲ್ಲಾಗಲಿ ಆಗಾಗ ನುಡಿಯುವಂತೆ ಹಿರಿಯರು ಅಭ್ಯಾಸ ಮಾಡಿದ್ದಾರೆ. ಪೂರ್ವದಲ್ಲಿ ಎರಡಕ್ಷರಗಳ ರಾಮ ಎಂಬ ಮಾತಿನಲ್ಲಿ ಎಷ್ಟು ಅರ್ಥವಿದೆಯೋ ಎಲ್ಲರಿಗೂ ತಿಳಿದಿರುತ್ತಿತ್ತು. ಕೃತಯುಗದಲ್ಲಿಯೇ ರಾಮ ಎಂಬ ಶಬ್ಧ ಆಧ್ಯಾತ್ಮಿಕತೆಗೆ ಆದರ್ಶವಾಗಿ ಇರುತ್ತಿತ್ತು. ನಾನು ನಾಶವಾಗುವವನೆಂದು ಎಲ್ಲರಲ್ಲಿ ದೃಢಭಾವನೆ ರಾಮ ಎನ್ನುವ ಎರಡಕ್ಷರಗಳಿಂದ ಇರುತ್ತಿತ್ತು. ಭಗವದ್ಗೀತೆಯಲ್ಲಿ ಹೇಳಿದ

ಕ್ಷರಭಾವ, ಎಂದರೆ ನಾಶ ಭಾವನೆ 'ರ' ಯಿಂದ, ನಾನು ಎಂಬ ಭಾವನೆ 'ಮ' ಯಿಂದ ಉಂಟಾಗುತ್ತಿದೆ. ಆದ್ದರಿಂದ ರಾಮ ಶಬ್ದ ಪರಮ ಪವಿತ್ರ ಅರ್ಥದಿಂದ ಕೂಡಿಕೊಂಡ ಶಬ್ದವಾಗಿ ಪೂರ್ವದಲ್ಲಿ ಭಾವಿಸುತ್ತಿದ್ದರು. ದೊಡ್ಡ ಭಾವವಿರುವ ರಾಮ ಶಬ್ದವನ್ನು ದಶರಥಪುತ್ರನಿಗೆ ನಾಮಧೆಯವಾಗಿ ಇಟ್ಟುಕೊಂಡಿದ್ದಾರೆ. ಆ ದಿನದಿಂದ ಆಧ್ಯಾತ್ಮಿಕ ಜ್ಞಾನ ಪ್ರಜೆಗಳಲ್ಲಿ ಕಡಿಮೆಯಾಗುವುದರಿಂದ ರಾಮ ಎನ್ನುವ ಎರಡಕ್ಷರಗಳು ಶ್ರೀರಾಮ ಎಂದು ಮೂರಕ್ಷರಗಳಾಗಿ ಬದಲಾಗಿಹೋಗುವುದೂ, ದಶರಥಪುತ್ರನಿಂದಲೇ ರಾಮ ಎನ್ನುವ ಹೆಸರು ಬಂದಿದೆಯೆಂದು, ರಾಮ ಎಂದರೆ ದಶರಥ ರಾಮನೆ ಎಂಬ ಭಾವನೆ ಎಲ್ಲರಲ್ಲಿ ಅಚ್ಚಳಿಯದೆ ಇಂದಿಗೂ ಜೀವಂತವಾಗಿ ಉಳಿದುಕೊಂಡಿದೆ.

ರಾಮ ಎಂದರೆ ದಶರಥ ಪುತ್ರನೆ ಎಂದು ರಾಮದಾಸು ಅಂದುಕೊಂಡರೆ, ರಾಮದಾಸುಗಿಂತ ಹಿರಿಯನಾದ ಕಬಿರ್‌ದಾಸ್ ತಾನು ಅಂದುಕೊಳ್ಳುವ ರಾಮ ದಶರಥ ರಾಮನು ಅಲ್ಲ ಎಂದುಕೊಂಡಿದ್ದಾನೆ. ಆದ್ದರಿಂದ ಒಂದು ಸಂದರ್ಭದಲ್ಲಿ ದಶರಥ ರಾಮನೆ ಕಾಣಿಸಿದರೂ ನೀನು ನನ್ನ ರಾಮನು ಅಲ್ಲ ಹೋಗು! ಎಂದಿದ್ದಾನಂತೆ. ನಾನು ಸ್ಮರಿಸುವ ರಾಮನು ನೀನು ಅಲ್ಲ ಎಂದು ಶ್ರೀರಾಮನನ್ನು ಕಬೀರ್ ಎಂದಿದ್ದಾನಂದರೆ ಕಬೀರ್‌ಗೆ ಪೂರ್ವದಲ್ಲಿನ ಜ್ಞಾನವು ಆಧ್ಯಾತ್ಮಿಕದ ಪ್ರಕಾರ ತಿಳಿದಿದೆಂಬಮಾತು. ರಾಮದಾಸುಗೆ ಆಧ್ಯಾತ್ಮಿಕತೆ ತಿಳಿಯದ್ದರಿಂದಲೇ ರಾಮ ಎನ್ನುವ ಮಾತು ಶ್ರೀರಾಮನ ಹೆಸರೆಂದುಕೊಂಡಿದ್ದಾನೆ. ಒಬ್ಬ ರಾಮದಾಸನೇ ಅಲ್ಲ, ಆದಿನದ ತ್ರೇತಾಯುಗ ದಿಂದ ಎಷ್ಟೋ ಜನ ದಶರಥ ರಾಮನೆ ನಿಜವಾದ ರಾಮ ಎಂದು ತಿಳಿದವರಿದ್ದಾರೆ. ಅಂತಹವರೆಲ್ಲರೂ ಶ್ರೀರಾಮನ ಮೇಲಿನ ಭಕ್ತಿಯಿಂದ ಶ್ರೀರಾಮನವಮಿಯನ್ನು ಹಬ್ಬವಾಗಿ ಮಾಡುತ್ತಿದ್ದಾರೆ. ಶ್ರೀರಾಮನವಮಿ ಈದಿನ ಭಾರತದೇಶವೆಲ್ಲಾ ಆಚರಿಸುವ ಹಬ್ಬವಾಗಿ ಇದೆ. ದೇವರ ಹತ್ತಿರಕ್ಕೆ ಸೇರಬೇಕೆಂದರೆ ಪ್ರಥಮ ಮೆಟ್ಟಿಲು ಭಕ್ತಿ, ಆದ್ದರಿಂದ ಭಕ್ತಿಯನ್ನು ಶ್ರೀರಾಮನ ಮೇಲೆ ಬೆಳೆಸಿಕೊಂಡು ಶ್ರೀರಾಮನವಮಿಯನ್ನು ಮಾಡುವುದರಿಂದ ಭಕ್ತಿಯಲ್ಲಿ ಪರಿಪಕ್ವತೆ ಹೊಂದಿ

ಕೊನೆಗೆ ರಾಮ ಎನ್ನುವ ಪದಕ್ಕೆ ಅರ್ಥ ನಮಗೆ ತಿಳಿಯುತ್ತದೆ. ಆದ್ದರಿಂದ ಶ್ರೀರಾಮನ ಮೇಲೆ ಭಕ್ತಿಯಿಂದಾದರೂ ಆಗಾಗ ರಾಮ ಎಂದುಕೊಳ್ಳುವುದು ಅಭ್ಯಾಸವಾದರೆ ಒಳ್ಳೆಯದು. ಹಾಗೆ ಅಭ್ಯಾಸ ಆಗುವುದರಿಂದ ಕೊನೆಗೆ ಎಂದಿಗಾದರೂ ರಾಮ ಎನ್ನುವ ಶಬ್ಧಕ್ಕೆ ಅರ್ಥ ತಿಳಿದುಕೊಳ್ಳುವುದಕ್ಕೆ ಅವಕಾಶ ಬರುತ್ತದೆ. ರಾಮಾ ಎಂದು ಯಾವುದೊ ಒಂದು ರೂಪದಿಂದ ಅಂದುಕೊಳ್ಳದೆ ಹೋದರೆ ಆ ಎರಡಕ್ಷರಗಳ ಭಾವನೆ ತಿಳಿಯುವುದಕ್ಕೆ ಅವಕಾಶ ಇರುವುದಿಲ್ಲ ಅಲ್ಲವೆ! ಆದ್ದರಿಂದ ರಾಮನ ಮೇಲೆ ಭಕ್ತಿಯಿಂದಾಗಲಿ, ಕೋಪದಿಂದಾಗಲಿ ಸಂದರ್ಭಾನುಸಾರ ರಾಮ ಎಂಬ ಶಬ್ಧವನ್ನು ಹೇಳುವುದು ಒಳ್ಳೆಯದೆಂದು ದೊಡ್ಡವರು ಹೇಳಿದ್ದಾರೆ.

'ರಾಮ' ಎಂದರೂ ಅದೇ ಪದವನ್ನು ತಿರುಗಿಸಿ 'ಮರಾ' ಎಂದರೂ ಅರ್ಥ ಮಾತ್ರ ಒಂದೇ. ಆದ್ದರಿಂದ ನಾರದಮಹರ್ಷಿ ವಾಲ್ಮೀಕಿಗೆ ಮೊದಲು "ಮರಾ" ಎಂಬ ಶಬ್ದವನ್ನೆ ಮಂತ್ರವಾಗಿ ಬೋಧಿಸಿದ್ದಾನಂತೆ. ವಾಲ್ಮೀಕಿಗೆ ನಾರದನು, ದಶರಥರಾಮನು ಹುಟ್ಟುವುದಕ್ಕಿಂತ ಮೊದಲೆ 'ಮರಾ' ಶಬ್ಧವನ್ನು ಮಂತ್ರವಾಗಿ ಉಪದೇಶಿಸಿದ್ದಾನೆ, ಅದೇ 'ಮರಾ' ಶಬ್ದವನ್ನೆ ಉಚ್ಛರಿಸುತ್ತಾ ವಾಲ್ಮೀಕಿ ಎಷ್ಟೋ ವರ್ಷಗಳು ಘೋರತಪಸ್ಸು ಮಾಡಿದ್ದಾನೆ. ಮರಾ ಶಬ್ಧವನ್ನು ಉಚ್ಛರಿಸುತ್ತಾ ಎಷ್ಟೋ ವರ್ಷಗಳಾಗಿರುವುದರಿಂದ ಆತನು ಕುಳಿತುಕೊಂಡ ಸ್ಥಳದಲ್ಲಿ ಹುತ್ತ ಬೆಳೆದುಹೋಗಿದೆ. ಹುತ್ತವನ್ನು ವಾಲ್ಮೀಕಮು ಎನ್ನುತ್ತಾರೆ. ಬಹಳಕಾಲದ ನಂತರ ಹುತ್ತದಿಂದ ಹೊರಗೆ ಬಂದವನಾದ್ದರಿಂದ ಆತನನ್ನು ವಾಲ್ಮೀಕಿ ಎಂದಿದ್ದಾರೆ. ವಾಲ್ಮೀಕಿಯನ್ನು ಆದಿಕವಿ ಎಂದರೆ ಆತನು ಎಷ್ಟು ಮೊದಲಿನವನೊ ನೀವೇ ಯೋಚಿಸಿರಿ. ರಾಮ ಎಂಬ ಪದವೊಂದರ ಅರ್ಥ ತಿಳಿದ ವಾಲ್ಮೀಕಿ ಆ ಹೆಸರಿರುವ ರಾಮನ ಚರಿತ್ರೆಯಾದ ರಾಮಾಯಣವನ್ನು ಬರೆಯಲ್ಪಟ್ಟಿದ್ದಾನೆ. ರಾಮಾಯಣಕ್ಕಿಂತ ಮೊದಲೇ ಕೆಲವು ಚರಿತ್ರೆಗಳನ್ನು ಕವಿಗಳು ಬರೆದಿರುವವು ಇವೆ. ಅಂದರೆ ವಾಲ್ಮೀಕಿ ಆದಿಕವಿ ಆದ್ದರಿಂದ ಆತನು ರಾಮನಿಗಿಂತ ಬಹಳ ಹಿಂದಿನ ಕಾಲದವನೆಂದು ಸುಲಭವಾಗಿ ಅರ್ಥವಾಗುತ್ತಿದೆ.

ಸಾವಿರ ವರ್ಷಗಳು ಬದುಕಿದ್ದ ವಾಲ್ಮೀಕಿ ವೃದ್ಧಾಪ್ಯದಲ್ಲಿ ರಾಮನ ಚರಿತ್ರೆಯನ್ನು ರಾಮಯಣವಾಗಿ ಬರೆದಿದ್ದಾನೆ.

ತ್ರೇತಾಯುಗದಿಂದ ಇಂದಿನ ಕಲಿಯುಗಕ್ಕೆ ಬಂದಿರುವ ಶ್ರೀರಾಮ ನವಮಿಯನ್ನು ಹಬ್ಬವಾಗಿ ಆಚರಿಸುವುದರಿಂದ, ರಾಮ ಎಂಬ ಶಬ್ಧ ಹೇಳುವುದರಿಂದ, ಆಧ್ಯಾತ್ಮಿಕ ಎಂದರೆ ಏನೊ ತಿಳಿಯದವರಿಗೂ ಸಹ ಎಂದಾದರೂ ತಿಳಿದುಕೊಳ್ಳುವುದಕ್ಕೆ ಅವಕಾಶ ಬರುತ್ತದೆ. ರಾಮ ಎನ್ನುವ ಪದ ಪವಿತ್ರವಾದುದೆಂದು ತಿಳಿಯಬಲ್ಲದು. ಆದ್ದರಿಂದ ಶ್ರೀರಾಮನವಮಿಯನ್ನು ಹಬ್ಬವಾಗಿ ಮಾಡುವವರೆಲ್ಲರೂ ಆ ದಿನ ಹೊಸ ಬಟ್ಟೆಗಳು ಧರಿಸಿ, ಹೊಸತಿಂಡಿ ತಿನ್ನುವುದಲ್ಲದೆ ಹೊಸ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ಶ್ರೀರಾಮನವಮಿ ದಿನ ಹೆಸರುಬೇಳೆ, ಪಾನಕವನ್ನು ಪ್ರಸಾದವಾಗಿ ಹಂಚಿ ಕೊಳ್ಳುವುದಲ್ಲದೆ ಜ್ಞಾನವನ್ನು, ಯೋಗವನ್ನು ಪ್ರವಚನವಾಗಿ ಹೇಳಿಕೊಳ್ಳಬೇಕು. ಈ ವಿಧವಾಗಿ ಹಾಗೆ ಹೊರಗಿನ ದಶರಥ ರಾಮನನ್ನು ಆರಾಧಿಸಿಯಾದರೂ ಒಳಗಿನ ಆತ್ಮಾರಾಮನನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿರಿ. ಈಗಿನಿಂದ ಉತ್ತರಾಯಣದಲ್ಲಿ ಬರುವ ಶ್ರೀರಾಮನವಮಿಯನ್ನು ಅರ್ಥದಿಂದ ಆಚರಿಸಿ ಸರಿಯಾದ ಜ್ಞಾನಫಲಿತವನ್ನು ಹೊಂದಬೇಕೆಂದು ತಿಳಿಸುತ್ತಿದ್ದೇವೆ.

# ಶ್ರೀಕೃಷ್ಣ ಜನ್ಮಾಷ್ಟಮಿ

ಶ್ರೀಕೃಷ್ಣನು ಹುಟ್ಟಿರುವುದು ಕ್ರೀಸ್ತ ಪೂರ್ವ 3228 ಸಂ॥ ಜೂಲೈ ತಿಂಗಳು 19ನೇ ದಿನಾಂಕ ಬಹುಳ ಅಷ್ಟಮಿ ದಿನದಂದು ವೃಷಭಲಗ್ನದಲ್ಲಿ ಹುಟ್ಟಿದ್ದಾನೆ. ಇದನ್ನನುಸರಿಸಿ ಇಲ್ಲಿಗೆ 5238 ವರ್ಷಗಳ ಪೂರ್ವದಲ್ಲಿ ಕೃಷ್ಣನು ಭೂಮಿಮೇಲೆ ಹುಟ್ಟಿದ್ದಾನೆಂದು ತಿಳಿಯುತ್ತಿದೆ. ಅರ್ಥ ಮಾಡಿಕೊಂಡರೆ ಆತನ ಜೀವನವೇ ದೊಡ್ಡ ಜ್ಞಾನ ಸಂದೇಶವೆಂದು ತಿಳಿಯುತ್ತದೆ. ಅದರ ಪ್ರಕಾರ ಆತನ ಜನ್ಮದಲ್ಲಿ ಸಹ ದೊಡ್ಡ ಜ್ಞಾನ ಅಡಕವಾಗಿದೆ ಎಂದು ಹೇಳಬಹುದು.

ಕೃಷ್ಣನು ಎದುರು ಕಾಲುಗಳಿಂದ ಹುಟ್ಟುವುದೇ ಒಂದು ವಿಶೇಷವಾದರೆ, ಆತನು ಹುಟ್ಟಿದ ಅಷ್ಟಮಿ ದಿನವೂ ಸಹ ವಿಶೇಷತೆಯನ್ನು ಸಂಪಾದಿಸಿಕೊಂಡಿದೆ. ಕೃಷ್ಣನ ಜನ್ಮಾಷ್ಟಮಿವೊಂದರ ವಿಶೇಷ ಏನೆಂದು ನೋಡುವುದಾದರೆ ಈ ರೀತಿಯಾಗಿ ಅರ್ಥವಾಗುತ್ತದೆ. ಸರ್ವಸಾಧಾರಣವಾಗಿ ಏನು ಜ್ಞಾನ ತಿಳಿಯದ ಪ್ರಜೆಗಳು ಸಹ **"ಅಷ್ಟಮಿ ಕಷ್ಟ, ನವಮಿ ನಷ್ಟ"** ಎನ್ನುತ್ತಾ ಅಷ್ಟಮಿ, ನವಮಿ ದಿನಗಳಲ್ಲಿ ಕೆಲವು ಕೆಲಸಗಳನ್ನು ಮಾಡುವುದಿಲ್ಲ. ಕೆಲವು ಕೆಲಸಗಳು ಪ್ರಾರಂಭಿಸುವ ಮೊದಲು ಈ ಎರಡು ತಿಥಿಗಳನ್ನು ಇಲ್ಲದಹಾಗೆ ನೋಡಿಕೊಳ್ಳುತ್ತಾರೆ. ನವಮಿ ನಷ್ಟ, ಅಷ್ಟಮಿ ಕಷ್ಟ ಎನ್ನುವುದರಲ್ಲಿ ನಿಮ್ಮ ಭಾವನೆ ಏನೆಂದು ಕೆಲವರನ್ನು ಕೇಳಿದರೆ ಅವರು ಹೀಗೆ ಹೇಳುತ್ತಿದ್ದಾರೆ. "ಅಷ್ಟಮಿ ದಿನ ಕೆಲಸ ಪ್ರಾರಂಭಿಸಿದರೆ ಆ ಕೆಲಸ ಕಷ್ಟದಿಂದ ಕೂಡಿಕೊಂಡಿರುವುದಾಗಿರುತ್ತದೆ. ಹಾಗೆಯೇ ನವಮಿ ದಿನ ಪ್ರಾರಂಭಿಸಿದರೆ ಆ ಕೆಲಸ ನಷ್ಟಗಳಿಂದ ಕೂಡಿಕೊಂಡಿರುವುದಾಗಿರುತ್ತದೆ" ಹೀಗೆ ಅವರು ಹೇಳುವ ಮಾತುಗಳನ್ನನುಸರಿಸಿ ನೋಡಿದರೆ ಇದು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ನಡೆಯುವುದಲ್ಲ. ಜ್ಯೋತಿಷ್ಯಶಾಸ್ತ್ರದಲ್ಲಿ ಅಂತಹ ಸೂತ್ರ ಯಾವುದು ಇಲ್ಲ. ಆದಲ್ಲಿಯೂ ಪೂರ್ವಕಾಲ ಈ ಮಾತು ಬಹಳ ಪ್ರಚಾರದಲ್ಲಿ ಇರುತ್ತಿತ್ತು. ಸುಮಾರು ಐವತ್ತು ವರ್ಷಗಳ ಕೆಳಗಿನವರೆಗು ಅಷ್ಟಮಿ, ನವಮಿ ಎನ್ನುವ ಮಾತುಗಳು ಅಲ್ಲಲ್ಲಿ ಕೇಳಿಬರುತ್ತಿದ್ದವು. ಪ್ರಸ್ಥುತ ನವೀನ ಕಾಲದಲ್ಲಿ ಆ ಮಾತು ಕಡಿಮೆಯಾಗಿಹೋಗಿದೆ. ಈಗಿನ ಓದುಗಳಲ್ಲಿ ಇರುವ ಮಕ್ಕಳಿಗೆ ತಿಥಿಗಳೆಂದರೆ ಏನೆಂದೂ ಸಹ ತಿಳಿಯದಂತೆ ಹೋಗಿದೆ. ಈಗಲೂ ಎಲ್ಲಿಯಾದರೂ ಹಳ್ಳಿಪ್ರಾಂತಗಳಲ್ಲಿ ಈ ದಿನ ಅಷ್ಟಮಿ, ಅಷ್ಟಮಿ ದಿನ ಪ್ರಯಾಣ ಎನ್ನುವುದಾಗಲಿ, ಇಷ್ಟುಕಾಲ ಇದ್ದು ಈಗ ಅಷ್ಟಮಿ ದಿನವಾ ಪ್ರಾರಂಭಿಸುವುದು ಎಂದಾಗಲಿ ಅನ್ನುವುದು ಇದೆ. ಇದನ್ನನುಸರಿಸಿ ಅಷ್ಟಮಿ, ನವಮಿ ಎನ್ನುವ ಎರಡು ತಿಥಿಗಳಲ್ಲಿ ಒಂದು ತಿಥಿ ನವಮಿ ಗಾಳಿಗೆ ಹೋಗಿದೆ. ಅಷ್ಟಮಿ ಮಾತ್ರ ಉಳಿದಿದೆ ಎಂದು ಅರ್ಥವಾಗುತ್ತಿದೆ. ಹಳ್ಳಿಪ್ರಾಂತಗಳಲ್ಲಿ ಎಲ್ಲಿಯೋ ಒಂದುಕಡೆ ಇಲ್ಲಿಯವರೆಗೂ ಉಳಿದಿರುವ ಅಷ್ಟಮಿಯೂ ಸಹ ಇನ್ನೂ ಹತ್ತು ವರ್ಷಗಳ ಕಾಲಕ್ಕೆ ಇಲ್ಲದಂತೆ ಹೋಗುತ್ತದೆಂದು ತಿಳಿಯುತ್ತಿದೆ. ಅಷ್ಟಮಿ ಕಷ್ಟ, ನವಮಿ ನಷ್ಟ ಎಂದು

ಕರೆಯುತ್ತಿದ್ದರೆಂದು ಹೇಳುವ ನಮ್ಮ ಮಾತುಗಳಿಗೆ ಸ್ವಲ್ಪ ಆಧಾರವಾಗಿ ಈಗಲೂ ಅಷ್ಟಮಿ ಉಳಿದಿದೆ. ಕಾಲಗಮನದಲ್ಲಿ ಎಷ್ಟೋ ಕಣ್ಮರೆಯಾಗಬಾರದೆಂದು ನಮ್ಮ ಅಪೇಕ್ಷೆ, ಆದ್ದರಿಂದ ಅಷ್ಟಮಿ ಕಷ್ಟ, ನವಮಿ ನಷ್ಟ ಎಂಬ ಮಾತನ್ನು ಏಕೆ ಜಾರಿಗೆ ತಂದಿದ್ದಾರೆ? ಎಂದಿನಿಂದ ಜಾರಿಯೊಳಗೆ ಬಂದಿದೆ? ಎನ್ನುವ ಪ್ರಶ್ನೆಗಳಿಗೆ ಉತ್ತರಗಳು ಹುಡಿಕಿಕೊಳ್ಳೋಣ.

ಅಷ್ಟಮಿ ಕಷ್ಟ, ನವಮಿ ನಷ್ಟ ಎಂಬ ಮಾತು ಶ್ರೀಕೃಷ್ಣನು ಹುಟ್ಟುವುದಕ್ಕಿಂತ ಮೊದಲೆ ಇಲ್ಲ. ಕೃಷ್ಣನು ಹುಟ್ಟಿದ ನಂತರ 90 ವರ್ಷಗಳಿಗೆ ಭಗವದ್ಗೀತೆಯನ್ನು ಹೇಳಿದ್ದಾನೆ. ಭಗವದ್ಗೀತೆಯನ್ನು ಹೇಳಿದ ನಂತರ ಕೃಷ್ಣನು ದೊಡ್ಡವನೆಂಬ ವಿಷಯ ಕೆಲವರಿಗೆ ಅರ್ಥವಾಗಿದೆ. ಅಂದಿನಿಂದ ಕೃಷ್ಣನು ಹುಟ್ಟಿದ ದಿನವನ್ನು ಗೋಕುಲದಲ್ಲಿಯು, ಮಧುರೆಯಲ್ಲಿಯು ಹಬ್ಬವನ್ನು ಆಚರಣೆಮಾಡಿಕೊಳ್ಳುವುದು ನಡೆಯುತ್ತಿದೆ. ಭಗವದ್ಗೀತೆ ಯುದ್ಧರಂಗದಲ್ಲಿ ಹೇಳಲ್ಪಟ್ಟಿದೆ. ಭಾರತಯುದ್ಧ ಕ್ರಿಸ್ತ ಪೂರ್ವ 5138ನೆ ವರ್ಷ ನಡೆದಿದೆ. ಇದನ್ನನುಸರಿಸಿ ಇಲ್ಲಿಗೆ ಭಗವದ್ಗೀತೆ ಹುಟ್ಟಿ 5148 ವರ್ಷಗಳು ಆಗಿದೆ. ಭಗವದ್ಗೀತೆ ಹುಟ್ಟಿದ ನಂತರ ಕೃಷ್ಣನು ಸಾಮಾನ್ಯ ಮನುಷ್ಯ ಅಲ್ಲವೆಂದು ಕೆಲವರು ಜ್ಞಾನಿಗಳು ಗ್ರಹಿಸಿದ್ದಾರೆ. ಆದಿನದಿಂದ ಶ್ರೀಕೃಷ್ಣ ಜಯಂತಿಯನ್ನು ಮಾಡುವುದಕ್ಕೆ ಪ್ರಾರಂಭಿಸಿದ್ದಾರೆ. ಹಾಗೆ ಏರ್ಪಟ್ಟಿರುವುದೆ ಶ್ರೀಕೃಷ್ಣ ಜನ್ಮಾಷ್ಟಮಿ. ಆದಿನದಿಂದ ಶ್ರಾವಣಮಾಸ ಬಹುಳ ಅಷ್ಟಮಿ ದಿನ ಶ್ರೀಕೃಷ್ಣನ ಜನ್ಮದಿನವನ್ನು ದೊಡ್ಡ ಹಬ್ಬವಾಗಿ ಮಾಡಿಕೊಳ್ಳುತ್ತಿದ್ದರು. ಆ ವಿಧವಾಗಿ ದೈವಜ್ಞಾನ ತಿಳಿದವರು ಪ್ರಾರಂಭಿಸಿದ ಶ್ರೀಕೃಷ್ಣಾಷ್ಟಮಿ ಸ್ವಲ್ಪ ಕಾಲಕ್ಕೆ ದೇಶವ್ಯಾಪ್ತವಾಗಿ ಎಲ್ಲರೂ ಮಾಡುವುದು ಮೊದಲುಮಾಡಿದ್ದಾರೆ. ಭಗವದ್ಗೀತೆಯನ್ನು ಹೇಳಿದ ನಂತರ ಕೃಷ್ಣನು 36 ವರ್ಷಗಳಿಗೆ ಮರಣಿಸಿದ್ದಾನೆ. ಕೃಷ್ಣನು ಸಜೀವವಾಗಿ ಇರುವಾಗಲೇ ಕೃಷ್ಣ ಜಯಂತಿಯನ್ನು ಕೃಷ್ಣಾಷ್ಟಮಿಯಾಗಿ ಮಾಡುವುದು ನಡೆದಿದೆ. ದ್ವಾಪರಯುಗದಲ್ಲಿಯೆ ಕೃಷ್ಣಾಷ್ಟಮಿ ಹಬ್ಬ ತಯಾರಾಗಿದೆ.

ಕೃಷ್ಣನು ಮರಣಿಸಿದ ಎರಡು ವರ್ಷಗಳ ನಂತರ ಕಲಿಯುಗ ಪ್ರಾರಂಭವಾಗಿದೆ. ಕಲಿಯುಗ ಪ್ರಾರಂಭದಲ್ಲಿ ದೇಶವೆಲ್ಲ ಮುಖ್ಯವಾದ ಹಬ್ಬವಾಗಿ

ಶ್ರೀಕೃಷ್ಣಾಷ್ಟಮಿ ಆಚರಣೆಯಲ್ಲಿತ್ತು. ಕಲಿಯುಗದಲ್ಲಿ ಕೃಷ್ಣಾಷ್ಟಮಿ ದೇಶವ್ಯಾಪ್ತವಾಗಿ ಐದಾರು ನೂರುವರ್ಷಗಳವರೆಗೂ ಉತ್ಸವವಾಗಿ ನಡೆದಿದೆ. ಅಂದಿನಿಂದ ಮಾಯಾ ಪ್ರಭಾವದಿಂದ ಕಾಲ ಕ್ರಮೇಣ ಕೃಷ್ಣಾಷ್ಟಮಿ ಹಬ್ಬ ಆಚರಿಸುವುದನ್ನು ಒಬ್ಬೊಬ್ಬರಾಗಿ ಬಿಡುತ್ತಾ ಬಂದಿದ್ದಾರೆ. ಆ ವಿಧವಾಗಿ ನಾಲ್ಕು ಇಲ್ಲವೆ ಐದುನೂರು ವರ್ಷಗಳಿಗೆ ಕೃಷ್ಣಾಷ್ಟಮಿಯನ್ನು ಮಾಡುವುದು ಶೇಕಡ 90 ರಷ್ಟು ಜನ ಬಿಟ್ಟಿದ್ದಾರೆ. ಕೊನೆಗೆ ಸ್ವಲ್ಪಕಾಲಕ್ಕೆ ಕೇವಲ ಐದರಷ್ಟು ಜನ ಮಾತ್ರವೆ ಅದೂ ಮಧುರ, ಗೋಕುಲವಾದ ನಂದಗಾವ್ ಪರಿಸರಪ್ರಾಂತಗಳಲ್ಲಿ ಮಾತ್ರವೇ ಆಚರಣೆ ಮಾಡುವುದು, ಅದರಲ್ಲಿ ಗೊಲ್ಲರು(ಯಾದವರು) ಮಾತ್ರವೇ ಆಚರಣೆ ಮಾಡುವುದು ಅನಿವಾರ್ಯವಾಗಿದೆ. ಗೊಲ್ಲರ ಹಟ್ಟಿಗಳಲ್ಲಿ ಕೃಷ್ಣನು ಚಿಕ್ಕಂದಿನಲ್ಲಿ ಮಾಡಿದ ಬೆಣ್ಣೆಯ ಕಳ್ಳತನವನ್ನು ಗುರುತು ಮಾಡುವುದಕ್ಕೆ ಉಟ್ಟಿಯನ್ನು ಒಡೆದುಹಾಕುವುದು ಇನ್ನೂ ಮೊದಲಾದ ಕಾರ್ಯಗಳನ್ನು ಹಬ್ಬದ ವಾತಾವರಣದಲ್ಲಿ ಈಗಲೂ ಮಾಡುತ್ತಿದ್ದಾರೆ. ಕಲಿಯುಗ ಪ್ರಾರಂಭದಲ್ಲಿ ಬಹಳ ವೈಭವವಾಗಿ ನಡೆದಿರುವ ಕೃಷ್ಣಾಷ್ಟಮಿ ಹಬ್ಬ ಇಂದು ಗುರುತಿಗೆ ಮಾತ್ರ ಉಳಿದಿದೆ. ಇಂತಹ ಪರಿಸ್ಥಿತಿ ಬರಬಾರದೆಂದು ಆದಿನದ ಹಿರಿಯರು ಒಂದು ಪ್ರಯೋಗ ಮಾಡಿದ್ದಾರೆ. ಆ ಪ್ರಯೋಗವೆ **ಅಷ್ಟಮಿ ಕಷ್ಟ, ನವಮಿ ನಷ್ಟ** ಎಂಬ ಮಾತು, ಈ ಪದಗಳ ಪ್ರಯೋಗವೇನೆಂದು ಕೆಲವರಿಗೆ ಅರ್ಥವಾಗದಿರಬಹುದು. ಆ ದಿನದ ಹಿರಿಯರು ಯಾವ ಉದ್ದೇಶದಿಂದ ಈ ಪದಗಳನ್ನು ಬಳಸಿದ್ದಾರೊ ಗಮನಿಸೋಣ.

ಪೂರ್ವದಲ್ಲಿ ಕೃಷ್ಣನು ಮಧುರಾನಗರದಲ್ಲಿ ಅಷ್ಟಮಿ ದಿನದಂದು ಹುಟ್ಟಿದ್ದಾನೆ. ಮರುದಿನ ನಂದಗಾವ್‌ನಲ್ಲಿ ಕಾಣಿಸಿದ್ದಾನೆ. ಹುಟ್ಟಿದ ರಾತ್ರಿಯೆ ವಸುದೇವನು ರಹಸ್ಯವಾಗಿ ಕೃಷ್ಣನನ್ನು ಮಧುರಾನಗರದಿಂದ ಪಕ್ಕದಲ್ಲಿಯೇ ಇರುವ ನಂದಗಾವ್‌ಗೆ ಸೇರಿಸಿದ್ದಾನೆ. ಆದ್ದರಿಂದ ಎರಡನೆ ದಿನ ಅಂದರೆ ಬೆಳಗಾದ ನಂತರ ಕೃಷ್ಣನು ಯಶೋದೆಗೆ ಹುಟ್ಟಿದ್ದಾನೆಂದು ಆ ಗ್ರಾಮಕ್ಕೆಲ್ಲಾ ತಿಳಿದುಹೋಗಿದೆ. ಕೃಷ್ಣನು ಹುಟ್ಟಿದ ಅಷ್ಟಮಿದಿನ ರಾತ್ರಿಸಮಯ, ಬೆಳಗಾದ

ನಂತರ ತಿಥಿ ನವಮಿ ಬಂದಿದೆ. ಗೊಲ್ಲರ ಹಟ್ಟಿಗಳಲ್ಲಿ ತಿಳಿದಿರುವುದು ನವಮಿದಿನ. ನಂದಗಾವ್‌ನಲ್ಲಿ ಕೃಷ್ಣನು ನವಮಿ ದಿನದಂದು ತಿಳಿಯಲ್ಪಟ್ಟಿದ್ದಾನೆ. ಮಥುರೆಯಲ್ಲಿ ಕೃಷ್ಣನು ಅಷ್ಟಮಿ ದಿನವೇ ಹುಟ್ಟಿದ್ದು, ಕೃಷ್ಣನೊಂದರ ಹುಟ್ಟು ಅಷ್ಟಮಿ ದಿನವಾದ್ದರಿಂದ ಆತ್ಮಜ್ಞಾನ ತಿಳಿದವರೆಲ್ಲರೂ ಶ್ರಾವಣ ಬಹುಳ ಅಷ್ಟಮಿ ದಿನದಂದು 'ಕೃಷ್ಣಾಷ್ಟಮಿ' ಎನ್ನುವ ಹೆಸರಿನಿಂದ ಆಚರಣೆ ಮಾಡುತ್ತಿದ್ದರು. ನಂದಗಾವ್‌ನಲ್ಲಿನ ಗೊಲ್ಲರೆಲ್ಲರು ಕೃಷ್ಣನು ತಮ್ಮ ಗ್ರಾಮದಲ್ಲಿ ಕಾಣಿಸಿದ ನವಮಿ ದಿನದಂದು 'ಗೋಕುಲಾಷ್ಟಮಿ' ಎನ್ನುವ ಹೆಸರಿನಿಂದ ನವಮಿದಿನ ಉತ್ಸವ ಮಾಡುತ್ತಿದ್ದರು. ಅವರು ಕುಲಾಭಿಮಾನದಿಂದ ತಮ್ಮ ಹೆಸರು ಇರುವಂತೆ 'ಗೋಕುಲ ಅಷ್ಟಮಿ' ಎಂದು ಆಚರಣೆ ಮಾಡುವುದು ನಡೆಯುತ್ತಿದೆ. ಈಗಲೂ ಸಹ ಶ್ರೀಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಎರಡು ಹೆಸರುಗಳಿಂದ ಅಷ್ಟಮಿ ಹಾಗೂ ನವಮಿ ಎರಡು ದಿನಗಳಂದು ಹಬ್ಬಗಳು ಮಾಡುವುದು ನಡೆಯುತ್ತಿದೆ. ಅಷ್ಟಮಿ ದಿನ ಜ್ಞಾನಿಗಳು ಮಾಡುವುದು ಕೃಷ್ಣಾಷ್ಟಮಿ, ನವಮಿ ದಿನ ಗೋಕುಲವಂಶದವರಾದ ಇಂದು ಯಾದವರೆಂಬುವ ಗೊಲ್ಲ ಕುಲದವರು ಪ್ರತ್ಯೇಕವಾಗಿ ಮಾಡುವುದು ಗೋಕುಲಾಷ್ಟಮಿ ಎಂದು ತಿಳಿಯಬೇಕು. ಕೃಷ್ಣನ ಹುಟ್ಟು ಅಷ್ಟಮಿ ದಿನವೆ ಆದರೂ ಕೃಷ್ಣಾಷ್ಟಮಿ, ಗೊಕುಲಾಷ್ಟಮಿ ಎನ್ನುವ ಎರಡು ಹೆಸರುಗಳಿಂದ ಅಷ್ಟಮಿ ದಿನ, ನವಮಿ ದಿನ ಹಬ್ಬ ಮಾಡುವುದು ನಡೆಯುತ್ತಿದೆ.

ಕೃಷ್ಣ ಜಯಂತಿಯನ್ನು ನವಮಿದಿನ ಮಾಡಿದರೂ ಅದರ ಹೆಸರು ಗೋಕುಲಾಷ್ಟಮಿ ಎಂದು ಅಷ್ಟಮಿಯನ್ನೇ ತೋರಿಸುತ್ತಿದೆ. ಆದ್ದರಿಂದ ಶ್ರೀಕೃಷ್ಣನ ಜನ್ಮೋತ್ಸವ ಅಷ್ಟಮಿ, ನವಮಿ ಎರಡು ದಿನಗಳು ನಡೆಯುವುದು ಆನಂದದಾಯಕ ವಾದ ಕೆಲಸವೆಂದು ತಿಳಿಯಬಹುದು. ಕಲಿಯುಗ ಪ್ರಾರಂಭದಲ್ಲಿ ದೇಶವ್ಯಾಪ್ತವಾಗಿ ಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಎರಡು ದಿನಗಳು ನಡೆಯುತ್ತಿದ್ದವು. ಆ ಎರಡು ದಿನಗಳಲ್ಲಿ ಎಲ್ಲರೂ ತಮ್ಮತಮ್ಮ ಕೆಲಸಗಳನ್ನು ಬಿಟ್ಟು ಉತ್ಸವ ಮಾಡುತ್ತಿದ್ದರು.

ಆ ದಿನಗಳಲ್ಲಿ ಯಾರನ್ನು ಕೆಲಸಗಳಿಗೆ ಕಳಿಸುತ್ತಿರಲಿಲ್ಲ. ಕೆಲಸಗಳಿದ್ದರೆ ಕೃಷ್ಣನ ಉತ್ಸವದಲ್ಲಿ ಪಾಲ್ಗೊಳ್ಳುವುದಿಲ್ಲವೆಂದು ಎಲ್ಲಾ ಕೆಲಸಗಳಿಗೂ ವಿರಾಮ ಹೇಳುತ್ತಿದ್ದರು. ಆ ದಿನಗಳಲ್ಲಿ ಯಾರಿಗಾದರೂ, ಯಾವ ಕೆಲಸಕ್ಕಾದರೂ ಒಳ್ಳೆಯ ಮುಹೂರ್ತವಿದ್ದರೂ ಅದನ್ನು ಮಾಡದಂತೆ, ಯಾರೂ ಯಾವ ಕೆಲಸದ ತಂಟೆಗೆ ಹೋಗದಂತೆ ಹಿರಿಯರು ಒಂದು ಭಯ ಇಟ್ಟಿದ್ದಾರೆ. ಅಷ್ಟಮಿ ದಿನ ಯಾವ ಕೆಲಸವನ್ನು ಪ್ರಾರಂಭಿಸಿದರೂ ಅದರಲ್ಲಿ ಕಷ್ಟ ಏರ್ಪಡುತ್ತದೆಂದು, ಆ ಕೆಲಸ ಸಕ್ರಮವಾಗಿ ಸಾಗುವುದಿಲ್ಲವೆಂದು ಹೇಳಿದ್ದಾರೆ. ಹಾಗೆಯೇ ನವಮಿ ದಿನ ಕೆಲಸವನ್ನು ಪ್ರಾರಂಭಿಸಿದರೆ ಅದರಿಂದ ಹೆಚ್ಚಾಗಿ ನಷ್ಟ ಬರುತ್ತದೆಂದು ಹೇಳಿದ್ದಾರೆ. ಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಸಕ್ರಮವಾಗಿ ನಡೆಯುವುದಕ್ಕೆ, ಎಲ್ಲರೂ ಒಂದಾಗಿ ಪಾಲ್ಗೊಳ್ಳುವುದಕ್ಕೆ ಅವಕಾಶ ಇರುವಂತೆ ಆ ವಿಧವಾಗಿ ಹೇಳಿ ಭಯವನ್ನು ಏರ್ಪಡಿಸಿ, ಆ ಎರಡು ದಿನಗಳಂದು ಕೆಲಸವನ್ನು ಬಿಡಿಸಿದ್ದಾರೆ. ಆ ಭಯ ಎಲ್ಲರಿಗೂ ತಿಳಿಯುವಂತೆ "ಅಷ್ಟಮಿ ಕಷ್ಟ ನವಮಿ ನಷ್ಟ" ಎಂಬ ಮಾತನ್ನು ಪ್ರಯೋಗವಾಗಿ ಬಳಸಿ ಜನರೆಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾರೆ. ಆದಿನ ಅವರು ಮಾಡಿರುವುದು ಒಳ್ಳೆಯ ಉದ್ದೇಶವೇ ಆದಲ್ಲಿಯೂ "ಅಷ್ಟಮಿ ಕಷ್ಟ, ನವಮಿ ನಷ್ಟ" ಎಂಬ ಮಾತು ಇಂದಿಗೂ ಯಾರಿಗೂ ತಿಳಿಯದೆ ಹೋಗಿದೆ. ಆ ಮಾತು ತಿಳಿಯದಹಾಗೆ ಹೋಗುವುದೆ ಅಲ್ಲದೆ ಕೃಷ್ಣಾಷ್ಟಮಿಯನ್ನು ಮಾಡುವವರು ಶೇ.90 ರಷ್ಟು ಕಡಿಮೆಯಾಗಿದ್ದಾರೆ.

ನಾವು ಕೃಷ್ಣ ಜಯಂತಿಯನ್ನು ಹಬ್ಬವಾಗಿ ಮಾಡಿದರೂ ಮಾಡದಿದ್ದರೂ ಆತನು ಅಷ್ಟಮಿ ತಿಥಿದಿನವೇ ಏಕೆ ಹುಟ್ಟಿದ್ದಾನೆಂದು ಯೋಚಿಸಿದರೆ ಎಷ್ಟೋ ಜ್ಞಾನ ಅರ್ಥವಿದೆಯೆಂದು ಹೇಳಿಕೊಂಡಿದ್ದೇವೆ! ಅದನ್ನು ಕುರಿತು ವಿವರಿಸಿ ಕೊಂಡರೆ ಈ ವಿಧವಾಗಿ ಅರ್ಥ ಇದೆ. ಅಮಾವಾಸ್ಯೆಯಿಂದ ಪೌರ್ಣಿಮೆವರೆಗೂ 15 ದಿನಗಳು, ಹಾಗೆ ಪೌರ್ಣಿಮೆಯಿಂದ ಅಮಾವಾಸ್ಯೆ ವರೆಗೂ 15 ದಿನಗಳಿರುವುದು ಎಲ್ಲರಿಗೂ ತಿಳಿದ ವಿಷಯವೆ. ಶ್ರೀಕೃಷ್ಣನು ಪೌರ್ಣಿಮೆಯಿಂದ ಅಮಾವಾಸ್ಯೆ ವರೆಗೂ ಇರುವ 15 ದಿನಗಳಲ್ಲಿ ಮಧ್ಯದಲ್ಲಿರುವ ಅಷ್ಟಮಿ ದಿನದಂದು

ಜನ್ಮಿಸಿದ್ದಾನೆ. 15 ದಿನಗಳಲ್ಲಿ ಪಾಡ್ಯಮಿಯಿಂದ ಸಪ್ತಮಿ ವರೆಗು 7 ದಿನಗಳು, ಮಧ್ಯದಲ್ಲಿ ಅಷ್ಟಮಿ, ನಂತರ ನವಮಿಯಿಂದ ಅಮಾವಾಸ್ಯದ ವರೆಗೂ 7 ದಿನಗಳು ಇವೆ. 7+1+7=15 ಹದಿನೈದು ಎರಡು ಸಮಾನ ಭಾಗಗಳು ಮಾಡಬೇಕೆಂದರೆ 7 ಮತ್ತೆ 7 ದಿನಗಳಾಗಿ ವಿಭಜಿಸಿದಾಗ ಒಂದು ಶೇಷ ಉಳಿಯುತ್ತದೆ. ಆ ಒಂದು ದಿನ ಅಷ್ಟಮಿಯಾಗಿ ಗುರುತಿಸಿ ಅಷ್ಟಮಿಗೆ ಮುಂದೆ 7 ದಿನಗಳಾಗಿ, ಹಿಂದೆ 7 ದಿನಗಳಾಗಿ ಗುರುತಿಸಿಕೊಳ್ಳಬೇಕು. ಶ್ರೀಕೃಷ್ಣನು ಮಧ್ಯ ದಿನವಾದ ಅಷ್ಟಮಿಯಂದೇ ಹುಟ್ಟುವುದಕ್ಕೆ ವಿಶೇಷವಾದ ಅರ್ಥವಿದೆ. ಅದೇನೆಂದರೆ!

ಭಗವಂತನಾದ ಶ್ರೀಕೃಷ್ಣನು ಜ್ಞಾನಕ್ಕೂ, ಅಜ್ಞಾನಕ್ಕೂ ಸಂಧಿಯಂತಹವನು ಅಜ್ಞಾನದಿಂದ ಜ್ಞಾನಕ್ಕೂ, ಜ್ಞಾನದಿಂದ ಅಜ್ಞಾನಕ್ಕೂ ಹೋಗುವುದಕ್ಕೆ ಆತನು ಕೇಂದ್ರದಂತವನು. ಎಷ್ಟೋ ಜನ ಜ್ಞಾನಿಗಳು ಸಹಿತ ಆತನು ತನ್ನ ಜೀವನದಲ್ಲಿ ನಡೆದುಕೊಂಡ ಪದ್ಧತಿಗಳನ್ನು ಆಚರಣೆಗಳನ್ನು ನೋಡಿ, ಆತನು ಹೇಳಿದ ಗೀತೆ ಎಲ್ಲಾ ಚೆನ್ನಾಗಿಯೇ ಇದೆ, ಆದರೆ ಆತನ ಆಚರಣೆ ನಮಗೆ ಇಷ್ಟವಾಗಲಿಲ್ಲ. ಪ್ರವರ್ತನೆ ಮುಖ್ಯ ಅಲ್ಲವೆ! ಒಳಗೆ ಗುಣಗಳನ್ನನುಸರಿಸಿಯೇ ಅಲ್ಲವೆ ಯಾರಾದರೂ ಆಚರಿಸುವುದು, ಆತನು ಎಷ್ಟೇ ಬೋಧನೆಗಳನ್ನು ಹೇಳಿದ್ದರೂ ಶ್ರೀಕೃಷ್ಣನು ಮಾಡಿದ ಕೆಲಸಗಳನ್ನನುಸರಿಸಿ ನೋಡಿದರೆ, ಬೋಧನೆಗಳು ಹೇಳಿದಷ್ಟು ದೊಡ್ಡವನಲ್ಲವೆಂದು ಕೆಲವರೆನ್ನುತ್ತಿದ್ದಾರೆ. ಅಂತಹವರು ಜ್ಞಾನದಿಂದ ಕೃಷ್ಣನ ಮೂಲಕ ಅಜ್ಞಾನದೊಳಗೆ ಹೋದಂತೆ, ಅವರಿಗಿರುವ ಜ್ಞಾನ ನಿಷ್ಪ್ರಯೋಜನೆ ಎಂಬಮಾತು. ಶ್ರೀಕೃಷ್ಣನು ಏನು ಹೇಳಿದ್ದಾನೊ ಅವರು ಅರ್ಥ ಮಾಡಿಕೊಂಡಿಲ್ಲ ಎಂಬಮಾತು. ಅಂತಹದರಲ್ಲಿ ಶ್ರೀಕೃಷ್ಣನು ಹೇಳಿದ ನಿಜವಾದ ಜ್ಞಾನ ಬೇರೆ ರೀತಿಯಾಗಿ ಅರ್ಥವಾಗಿ ಪ್ರವರ್ತನೆಗೆ ಭಿನ್ನವಾಗಿ ತೋಚಿದಾಗ ಅವರು ಶ್ರೀಕೃಷ್ಣನಿಗೆ ಭಿನ್ನವಾಗಿ ಹೋಗುತ್ತಾರೆ. ಶ್ರಿಕೃಷ್ಣನು ಜ್ಞಾನಕೇಂದ್ರವಾದಾಗ, ಆತನಿಗೆ ಭಿನ್ನವಾಗಿ ಹೋಗುವವರು ಅಜ್ಞಾನದಕಡೆ ಹೋಗುತ್ತಿದ್ದಾರೆಂದೇ ತಿಳಿಯಬೇಕು. ಹಾಗೆ ಶ್ರೀಕೃಷ್ಣನನ್ನು ನೋಡಿ ಆತನು **ಹೇಳಿರುವುದು, ಮಾಡುವುದು,**

**ಮಾಡಿಸುವುದು ಎಲ್ಲಾ** ಒಂದೇಯೆಂದು ತಿಳಿದವರು ಜ್ಞಾನದಕಡೆ ಸಾಗಿಹೋಗುತ್ತಾರೆ. ಆತನನ್ನು ನೋಡುವ ದೃಷ್ಠಿಯಿಂದ ಕೆಲವರು ಜ್ಞಾನದಕಡೆಗೆ, ಕೆಲವರು ಅಜ್ಞಾನದಕಡೆಗೆ ಹೋಗುತ್ತಿದ್ದಾರೆ. ಆದ್ದರಿಂದ ಶ್ರೀಕೃಷ್ಣನು ಅಲ್ಲಿ ಜ್ಞಾನಕ್ಕೂ, ಇಲ್ಲಿ ಅಜ್ಞಾನಕ್ಕೂ ಮಧ್ಯದಲ್ಲಿರುವವನೆಂದು ತಿಳಿಯವಹಾಗೆ ಅಷ್ಟಮಿದಿನವನ್ನೇ ಆರಿಸಿಕೊಂಡು ಹುಟ್ಟಿದ್ದಾನೆ. ಶ್ರೀಕೃಷ್ಣನು ಬಹುಳಪಕ್ಷ ಅಷ್ಟಮಿಯಂದು ಏಕೆ ಹುಟ್ಟಬೇಕು? ಶುಕ್ಲಪಕ್ಷ ಅಷ್ಟಮಿ ದಿನ ಏಕೆ ಹುಟ್ಟಲಿಲ್ಲ? ಅದಕ್ಕೆ ಕಾರಣ ಏನಾಗಿರಬಹುದೆಂಬ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!




ಜ್ಞಾನಬೋಧನೆಗಳಲ್ಲಿ ಚಂದ್ರನನ್ನು ಜ್ಞಾನಚಿಹ್ನೆಯಾಗಿ ಹೇಳಿದ ಸಂದರ್ಭಗಳು ಇವೆ. ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 25ನೇ ಶ್ಲೋಕದಲ್ಲಿ ಯೋಗಿಗಳಿಗೆ ಮರುಜನ್ಮ ಇದ್ದರೆ ಜ್ಞಾನವಿಕಾಸಹೊಂದಿ ಹುಟ್ಟುತ್ತಾರೆಂದು ಹೇಳುತ್ತಾ "ಚಾಂದ್ರಮಸಂ ಜ್ಯೋತಿಃ" ಚಂದ್ರತೇಜಸ್ಸು ಹೊಂದಿ ಹುಟ್ಟುತ್ತಾರೆಂದು ಜ್ಞಾನವಿಕಾಸವನ್ನು ಚಂದ್ರನ ಬೆಳದಿಂಗಳಿಗೆ ಹೋಲಿಸಿ ಹೇಳಿದ್ದಾರೆ. ಆದ್ದರಿಂದ ಬೆಳದಿಂಗಳಾದ ಪೌರ್ಣಿಮೆಯನ್ನು ಜ್ಞಾನವಾಗಿ, ಕತ್ತಲಾದ ಅಮಾವಾಸ್ಯೆಯನ್ನು

ಅಜ್ಞಾನವಾಗಿ ಸುಲಭವಾಗಿ ಹೋಲಿಸಿಕೊಳ್ಳಬಹುದು. ಪರಮಾತ್ಮ ಜ್ಞಾನಯುತನಾಗಿದ್ದು ಅಜ್ಞಾನಯುತವಾದ ಪ್ರಪಂಚದೊಳಗೆ ಬಂದು ಭಗವಂತನಾಗಿ ಹುಟ್ಟಿದ್ದಾನೆ. ಆದ್ದರಿಂದ ಜ್ಞಾನ ಚಿಹ್ನೆಯಾದ ಪೌರ್ಣಿಮೆಯಿಂದ ಕತ್ತಲಾಗುತ್ತಾ ಹೋಗಿ ಕೊನೆಗೆ ಅಮಾವಾಸ್ಯೆಯಾಗಿ ಬದಲಾಗುವ ಬಹುಳ ಪಕ್ಷಮಿಯಲ್ಲಿ ಹುಟ್ಟಿದ್ದಾನೆ. ಹಾಗೆ ಹುಟ್ಟಿದ ಆತನು ಆಕಡೆ ಜ್ಞಾನಿಯೊ, ಈಕಡೆ ಅಜ್ಞಾನಿಯೊ ಯಾರಿಗೂ ಅರ್ಥವಾಗದಂತೆ, **ಜ್ಞಾನ ಅಜ್ಞಾನ ಎರಡು ನನ್ನಲ್ಲಿಯೇ ಇವೆಯೆಂಬಂತೆ ಮತ್ತು ಜ್ಞಾನಕ್ಕೂ ಅಜ್ಞಾನಕ್ಕೂ ನಾನೇ ಮಾರ್ಗ, ನಾನೇ ದ್ವಾರವು** ಎನ್ನುವಂತೆ. ಮಧ್ಯದಲ್ಲಿ ಅಷ್ಟಮಿ ದಿನ ಹುಟ್ಟಿದ್ದಾನೆ, ಪೌರ್ಣಿಮೆ ಕಳೆದುಹೋದ ನಂತರ ಬರುವ ಅಷ್ಟಮಿ ದಿನ ಹುಟ್ಟಿದ್ದಾನೆ. ಆದ್ದರಿಂದ ಪರಮಾತ್ಮ ಜ್ಞಾನಪ್ರಕಾಶವಂತವಾದ ಪದದಿಂದ ಅಜ್ಞಾನ ಅಂಧಕಾರವಾದ ಪ್ರಪಂಚದೊಳಗೆ ಬಂದಿದ್ದಾನೆಂದು ತಿಳಿಯಬೇಕು. ಈ ವಿಧವಾಗಿ ಆತನು ಹುಟ್ಟಿದ ದಿನದಂದು ಸಹ ಎಷ್ಟೋ ವಿಶೇಷವಾದ ಅರ್ಥ ಒಳಗೊಂಡಿದೆ. ಆದ್ದರಿಂದ ಆತನು ಹುಟ್ಟಿದ ದಿನವನ್ನು ಮಹಾಪರ್ವದಿನವಾಗಿ ಭಾವಿಸಿ, ಆ ದಿನವನ್ನು ಶ್ರೀಕೃಷ್ಣಾಷ್ಟಮಿ ಎಂದು ಹೆಸರಿಟ್ಟು ಪೂಜಿಸಿಕೊಳ್ಳುತ್ತಿದ್ದೇವೆ.

ಯಾರಾದರೆ ಸಕಲ ಸೃಷ್ಟಿಗೆ ಆಧಾರವಾಗಿ ಇದ್ದಾನೊ, ಸಕಲ ದೇವತೆಗಳು ಯಾರನ್ನಾದರೆ ದೇವರೆಂದು ಮುಗಿದಿದ್ದಾರೊ, ಅಣುಅಣುವು ವ್ಯಾಪಿಸಿ ಯಾರಿಗೂ ಕಾಣಿಸದ ಶಕ್ತಿ ಏನಾದರೆ ಇದೆಯೋ, ಕ್ಷಣ ಕ್ಷಣವು ನಡೆಯುತ್ತಿರುವ ಕಾಲವಾಗಿ, ಎಲ್ಲರಿಗೂ ಆಯುವಾಗಿ ಆರೋಗ್ಯವಾಗಿ, ಮರಣವಾಗಿ ಯಾರಾದರೆ ಇದ್ದಾರೋ, ಆ ದೇವರೆ ಕೃಷ್ಣನಾಗಿ ಹುಟ್ಟಿ, ಮನುಷ್ಯನಂತೆ ಕದಲಾಡಿದ ಒಬ್ಬ ವ್ಯಕ್ತಿ ಎಂದು ಹೇಳಿದರೆ ಯಾರಾದರೂ ನಂಬುತ್ತಾರಾ? ನಂಬುವುದಿಲ್ಲ. ಅಷ್ಟುದೊಡ್ಡ ದೇವರು ಮನುಷ್ಯನಾಗಿ ಹುಟ್ಟುವುದೇನು? ಎಂಬ ಪ್ರಶ್ನೆ ಬಾರದೆ ಇರುವುದಿಲ್ಲ. ಇಲ್ಲಿ ಒಂದು ಚಿಕ್ಕ ಉಪಮಾನವನ್ನು ಹೇಳಿಕೊಳ್ಳೋಣ. ಸಮುದ್ರ ಸಕಲ ಭೂಖಂಡಗಳನ್ನು ತಾಕಿ ಇದೆ. ಬಹಳ ವಿಶಾಲವಾದುದು, ಅದರಲ್ಲಿ ಇಷ್ಟು ಎಂದು ಹೇಳಲಾರದ ಅಸಂಖ್ಯಾತ ಜೀವರಾಶಿಗಳಿವೆ. ಸಮುದ್ರ ಇಲ್ಲದ್ದು

ಭೂಮಿಗೆ ಉಳಿಗಾಲವೆ ಇಲ್ಲ ಎಂದು ಹೇಳಲ್ಪಡುವ ಸಮುದ್ರ ನಿನ್ನ ಮನೆಯಲ್ಲಿಯೂ ನಿನ್ನ ಶರೀರದಲ್ಲಿಯೂ ಇದೆ ಎಂದರೆ ಯಾರಾದರೂ ನಂಬುತ್ತಾರಾ? ದೇವರೆ ಕೃಷ್ಣನು ಎಂದರೆ ಹೇಗೆ ನಂಬುವುದಿಲ್ಲವೊ ಹಾಗೆ ಸಮುದ್ರವು ಮನೆಯಲ್ಲಿ ಇದೆಯೆಂದರೆ ನಂಬುವುದಿಲ್ಲ. ಅಷ್ಟು ದೊಡ್ಡ ದೇವರು ಇಷ್ಟು ಚಿಕ್ಕ ಮನುಷ್ಯನಾ! ಎಂದು ಹೇಗೆ ನಂಬುವುದಿಲ್ಲವೊ, ಹಾಗೆ ಅಷ್ಟು ದೊಡ್ಡ ಸಮುದ್ರ ಇಷ್ಟು ಚಿಕ್ಕ ಮನೆಯಲ್ಲಿ ಇದೆಯಾ! ಎಂದು ನಂಬುವುದಿಲ್ಲ. ಆದರೂ ವಿವರಿಸಿಕೊಂಡು ನೋಡಿದರೆ ದೇವರು ಮನುಷ್ಯನಲ್ಲಿ ಇರುವುದು ನಿಜವೆ, ಹಾಗೆಯೇ ಸಮುದ್ರ ಮನೆಯಲ್ಲಿರುವುದು ಸಹ ನಿಜವೆ. ಅಸಾಧ್ಯವೆಂದುಕೊಂಡಿರುವುದನ್ನು ಸುಸಾಧ್ಯ ಎನ್ನುವಂತೆ ಮಾಡುವ ವಿವರವೇನೆಂದು ನೋಡಿದರೆ ಈ ವಿಧವಾಗಿ ವಿವರವಿದೆ.

ನೀರು ಸಮುದ್ರದಲ್ಲಿ ಇದೆ. ಸಮುದ್ರವೆಲ್ಲಾ ತುಂಬಿರುವ ನೀರಿಗೆ ಕೆಲವು ಧರ್ಮಗಳು ಇವೆ. ಹಾಗೆಯೇ ವಿಶ್ವದಲ್ಲಿ ದೇವರಿದ್ದಾನೆ. ವಿಶ್ವವೆಲ್ಲಾ ತುಂಬಿರುವ ದೇವರಿಗೆ ಕೆಲವು ಧರ್ಮಗಳು ಇವೆ. ಎಷ್ಟೋ ಲೆಕ್ಕವಿಲ್ಲದಷ್ಟು ನೀರಿನ ಬಿಂದುಗಳ ಸಂಮಿಶ್ರವೇ ಸಮುದ್ರವೆಲ್ಲಾ ತುಂಬಿರುವ ನೀರು. ಹಾಗೆಯೇ ಎಷ್ಟೊ ದೈವ ಅಂಶಗಳ ಮೊತ್ತವೇ ದೇವರು. ಸಮುದ್ರವೆಲ್ಲಾ ತುಂಬಿರುವ ನೀರಿಗೆ ಯಾವ ಧರ್ಮವಿದೆಯೋ, ಅದೇ ಧರ್ಮ ನೀರಿನ ಬಿಂದುವಿಗೂ ಸಹ ಇದೆ. ಹಾಗೆ ವಿಶ್ವವೆಲ್ಲಾ ತುಂಬಿರುವ ದೇವರಿಗೆ ಯಾವ ಧರ್ಮವಿದೆಯೋ, ಅದೇ ಧರ್ಮವು ದೈವ ಅಂಶಕ್ಕೂ ಸಹ ಇದೆ. ಸಮುದ್ರದಲ್ಲಿನ ಅಖಂಡವಾದ ನೀರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ಖಂಡವಾದ ನೀರಿನ ಬಿಂದುವಿಗೂ ಸಹ ಇದೆಯೆಂದು ಹೇಗೆ ಹೇಳುತ್ತಿದ್ದೇವೊ, ಹಾಗೆಯೇ ವಿಶ್ವದಲ್ಲಿನ ಅಖಂಡವಾದ ದೇವರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ಖಂಡವಾದ ದೇವರ ಅಂಶಕ್ಕೂ ಸಹ ಇದೆ. ಗಮನಿಸಬೇಕಾದ ವಿಷಯ ಏನೆಂದರೆ ಅಖಂಡವಾಗಿರುವ ನೀರನ್ನು ಸಮುದ್ರ ಎನ್ನುತ್ತಿದ್ದೇವೆ. ಸಮುದ್ರದಿಂದ ಖಂಡವಾಗಿ ಬೇರೆಯಾದ ಒಂದು ನೀರಿನ ಚುಕ್ಕೆಯನ್ನು ನೀರಿನಬಿಂದುವೆನ್ನುತ್ತಿದ್ದೇವೆ. ಹಾಗೆಯೇ

ಅಖಂಡವಾಗಿ ಎಲ್ಲಾಕಡೆ ವ್ಯಾಪಿಸಿರುವ ದೈವಶಕ್ತಿಯನ್ನು ದೇವರೆನ್ನುತ್ತಿದ್ದೇವೆ. ದೇವರಿಂದ ಬೇರೆಯಾಗಿ ಖಂಡವಾಗಿರುವ ಒಂದು ದೈವ ಅಂಶವನ್ನು ಭಗವಂತನೆನ್ನುತ್ತಿದ್ದೇವೆ. ಸಮುದ್ರಕ್ಕೂ ನೀರಿನ ಬಿಂದುವಿಗೂ ಒಂದೇ ಧರ್ಮವಿರುವಂತೆ, ದೇವರಿಗೂ ಭಗವಂತನಿಗೂ ಒಂದೇ ಧರ್ಮ ಇದೆ. ದೇವರ ಧರ್ಮಗಳು ದೇವರಿಗೆ ಗೊತ್ತು, ದೇವರೆ ಮಾನವರಿಗೆ ತಿಳಿಯಪಡಿಸಬೇಕೆನ್ನುವ ಧರ್ಮ ಭಗವಂತನ ಹತ್ತಿರವಿದೆ. ಹೀಗೆ ದೇವರ ಧರ್ಮಗಳು ಭಗವಂತನಿಗೂ ಗೊತ್ತು. ಹಾಗೆಯೇ ದೇವರೆ ಮಾನವನಿಗೆ ತಿಳಿಯಪಡಿಸಬೇಕು ಎನ್ನುವಂತೆ ಭಗವಂತನೆ ಮನುಷ್ಯರಿಗೆ ತಿಳಿಯಪಡಿಸುತ್ತಾನೆ. ಈ ಉಪಮಾನದ ಅರ್ಥವನ್ನು ಅನುಸರಿಸಿ ದೇವರೆ ಭಗವಂತನಾಗಿ ಒಬ್ಬ ಮನುಷ್ಯ ರೂಪದಲ್ಲಿ ಬರುತ್ತಾನೆಂಬುದು ಯಾರಾದರೂ ವಿಶ್ವಾಸಿಸುತ್ತಾರೆ. ದೇವರು ಹಾಗೂ ಭಗವಂತನು ಇಬ್ಬರೂ ಒಂದೇ ಆದರೂ ಇರುವ ಸ್ಥಿತಿಯನ್ನನುಸರಿಸಿ **ಅಪರಿಮಿತವಾಗಿ ಇರುವಾಗ ದೇವರು, ಪರಿಮಿತವಾಗಿ ಇರುವಾಗ ಭಗವಂತನೆಂದು** ಕರೆಯುತ್ತಿದ್ದೇವೆ.

ಪರಿಮಿತಿ ಇಲ್ಲದ ದೇವರು ಪರಿಮಿತಿಯಾದ ಶರೀರದೊಳಗೆ, ಆಕಾರವಿಲ್ಲದ ದೇವರು ಆಕಾರವಿರುವ ಶರೀರದೊಳಗೆ, ಹೆಸರಿಲ್ಲದ ದೇವರು ಹೆಸರಿರುವ ಶರೀರದೊಳಗೆ, ಯಾವ ಕಾರ್ಯ ಮಾಡದ ದೇವರು ಕೆಲಸ ಮಾಡುವ ಶರೀರದೊಳಗೆ ಬಂದಾಗ ಆ ಶರೀರವನ್ನು ಭಗವಂತನು ಎನ್ನುತ್ತಿದ್ದೇವೆ. ದೇವರ ಅಂಶ ಶರೀರಧಾರಿಯಾಗಿ ಬಂದಿರುವುದೆ ಶ್ರೀಕೃಷ್ಣನು. ಆತನೆ ಭಗವಾನ್ ಶ್ರೀಕೃಷ್ಣ. ಅಷ್ಟು ದೊಡ್ಡ ದೇವರು ಮಾನವಾಕಾರದಿಂದ ಬಂದು ಹುಟ್ಟಿದ ಸಮಯ ಬಹಳ ಪವಿತ್ರವಾದುದೆಂದು, ಮಹತ್ವವಾದದ್ದೆಂದು ಭಗವಂತನ ಜನ್ಮದಿನವನ್ನು ಹಬ್ಬವಾಗಿ ಮಾಡಿಕೊಳ್ಳುತ್ತಿದ್ದೇವೆ. ಅದೇ ಕೆಲವರಿಗೆ ಕೃಷ್ಣಾಷ್ಟಮಿ, ಕೆಲವರಿಗೆ ಗೋಕುಲಾಷ್ಟಮಿ. ಕಲಿಯುಗ ಆರಂಭದಲ್ಲಿ ಎಲ್ಲರೂ ಮಾಡುವ ಕೃಷ್ಣಜಯಂತಿ ಇಂದು ಕಣ್ಮರೆಯಾಗಿ ಹೋಗುತ್ತಿದೆ. ದೇವರಿಗೆ ವಿರುದ್ಧವಾದುದು ಮಾಯೆ. ಮಾಯೆ ಮಾನವನಲ್ಲಿದ್ದು ದೇವರಕಡೆ ಹೋಗದಂತೆ ಮಾಡುತ್ತಿದೆ. ಹಾಗೆ ಮಾಡುವುದಕ್ಕೆ ಬೇಕಾದ ಪ್ರತ್ಯೇಕವಾದ ಏರ್ಪಾಡುಗಳನ್ನೆಲ್ಲಾ ಮಾಡುತ್ತಿದೆ.

ಮಾಯೆ ಮಾಡುವ ಆ ಕಾರ್ಯಕ್ರಮಗಳಲ್ಲಿ ಕೃಷ್ಣಾಷ್ಟಮಿಯನ್ನು ಇಲ್ಲದಹಾಗೆ ಮಾಡುವುದು ಸಹ ಒಂದು ಕೆಲಸ. ಆದ್ದರಿಂದ ಪೂರ್ವದಲ್ಲಿ ಹಿರಿಯರು ಇಟ್ಟಿರುವ ನಾಣ್ನುಡಿ ಮಾತಾದ ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವುದು ಈ ಕಾಲದಲ್ಲಿ ಯಾರಿಗೂ ತಿಳಿಯದಹಾಗೆ ಮಾಡಿದೆ. ಆ ಮಾತು ತಿಳಿಯದಂತೆ ಹೋಗಿರುವುದರಿಂದ ಕೃಷ್ಣಜಯಂತಿಯೊಂದರ ಜ್ಞಾಪಕ ಬಹಳಜನರಿಗೆ ಇಲ್ಲದಂತೆ ಹೋಗಿದೆ. ಮಾಯಾ ಪ್ರಭಾವದಿಂದ ಮನುಷ್ಯರು ಭಗವಂತನನ್ನು ಸ್ವಲ್ಪವೂ ಗುರುತಿಸಲಾರದೆ ಹೋಗಿದ್ದಾರೆ. ಆತನನ್ನು ಸಾಧಾರಣ ಮನುಷ್ಯರಿಗಿಂತ ಕಡಿಮೆಯಾಗಿ ಹೋಲಿಸಿಕೊಂಡಿದ್ದಾರೆ. ಮಾಯೆ ಮನುಷ್ಯನಲ್ಲಿ ಗುಣಗಳ ರೂಪದಲ್ಲಿ ಇದ್ದೂ, ದೈವಮಾರ್ಗದೊಳಗೆ ಮನುಷ್ಯನನ್ನು ಹೋಗದಂತೆ ಮಾಡುತ್ತಿದೆ. ಅಷ್ಟೇ ಅಲ್ಲದೆ ಮನುಷ್ಯನನ್ನು ದೇವರಕಡೆ ಹೋಗುತ್ತಿರುವಂತೆ ನಂಬಿಸಿ ಪಕ್ಕದದಾರಿ ಹಿಡಿಸಬೇಕೆಂಬುದು ಮಾಯೆಯೊಂದರ ಯೋಜನೆ. ಆ ಯೋಜನೆಯ ಭಾಗವಾಗಿ ಕೃಷ್ಣಾಷ್ಟಮಿಗೆ ಬದಲಾಗಿ ಅದರ ಸ್ಥಾನದಲ್ಲಿ ಮತ್ತೊಂದು ಹಬ್ಬವನ್ನು ತಂದಿಟ್ಟು, ಎಲ್ಲರ ದೃಷ್ಟಿ ಅದರಕಡೆ ಬೀಳುವಂತೆ ಮಾಡಿದೆ. ದೇವರು ಹೇಳಿದಹಾಗೆ ಮಾಯೆಗೆ ಬಲವೆಚ್ಚು ಆದ್ದರಿಂದ ಕೃಷ್ಣಾಷ್ಟಮಿಯನ್ನು ಇಲ್ಲದಂತೆ ಮಾಡಿ, ಮಾಯೆ ತನ್ನ ಹಬ್ಬವನ್ನು ತಂದಿಟ್ಟು ಚಿಕ್ಕವರನ್ನು ದೊಡ್ಡವರನ್ನು ಅದರಲ್ಲಿ ಪಾಲ್ಗೊಳ್ಳುವಂತೆ ಮಾಡಿದೆ.

ಪೂರ್ವದಲ್ಲಿ ಕೃಷ್ಣಾಷ್ಟಮಿಯನ್ನು ಹನ್ನೊಂದು ದಿನಗಳ ಹಬ್ಬವಾಗಿ ಮಾಡುತ್ತಿದ್ದರು. ಕೃಷ್ಣಾಷ್ಟಮಿ ಮನೆಯೊಳಗೆ ಮಾಡುವ ಹಬ್ಬವಲ್ಲ. ಪೂರ್ವದಲ್ಲಿ ಎಲ್ಲರೂ ಬೀಧಿಗಳಲ್ಲಿಯೇ ಮಾಡುತ್ತಿದ್ದರು. ಬೀಧಿಗಳಲ್ಲಿಯೇ ಉಟ್ಟಿ ಆಟ ಆಡುತ್ತಿದ್ದರು. ಬೀಧಿಗಳಲ್ಲಿಯೇ ಗಂಡಸರು ಗೋಪಿಕರಂತೆ ಹೆಂಗಸರ ವೇಷ ಹಾಕಿಕೊಂಡು ಬೆಣ್ಣೆ ಕಳ್ಳರಾಗಿ ಬಂದರೆ ಅವರನ್ನು ಹೆಂಗಸರು ಮರಗಳಿಂದ, ಕಟ್ಟಿಗೆಗಳಿಂದ ಒಡೆಯುತ್ತಿದ್ದರು. ಹೆಂಗಸರ ವೇಷದಲ್ಲಿರುವ ಗಂಡಸರನ್ನು ಹೆಂಗಸರು ಒಡೆಯುವುದು ಸಹ ಉತ್ಸವದಲ್ಲಿ ಒಂದು ಭಾಗವಾಗಿ ಇರುತ್ತಿತ್ತು. ಬೀಧಿಗಳಲ್ಲಿಯೇ ಮಂಟಪಕಟ್ಟಿ, ಆ ಮಂಟಪದಲ್ಲಿ ಕೃಷ್ಣನ ಪ್ರತಿಮೆಯನ್ನು

ಇಟ್ಟು, ಹನ್ನೊಂದು ದಿನಗಳು ಪೂಜಿಸುತ್ತಿದ್ದರು. ಬೀಧಿಯಲ್ಲಿನ ಮಂಟಪದ ಮುಂದೆ ಕೃಷ್ಣಲೀಲೆಗಳನ್ನು ಪ್ರದರ್ಶಿಸುತ್ತಾ ನಿಲುವಿನಾಟ, ಬೆಣ್ಣೆ ಕಳ್ಳತನದ ಆಟ ಮೊದಲಾದವು ಆಡುತ್ತಾ ಸಂತೋಷದಿಂದ ಹನ್ನೊಂದು ದಿನಗಳ ಕಾಲ ಉತ್ಸವಮಾಡಿ, ಕೊನೆಯ ಹನ್ನೊಂದನೆಯ ದಿನ ಅಂದರೆ ಚವತಿ ದಿನ ಮಂಟಪದಲ್ಲಿನ ಕೃಷ್ಣಪ್ರತಿಮೆಯನ್ನು ಮೆರವಣಿಗೆಮಾಡಿ, ಆ ಪ್ರತಿಮೆಯನ್ನು ಮನೆಯಲ್ಲಿ ಇಟ್ಟುಕೊಂಡು ಉತ್ಸವವನ್ನು ಮುಗಿಸುತ್ತಿದ್ದರು. ದೇಶದಲ್ಲಿ ಮೊಟ್ಟಮೊದಲ ಬೀಧಿ ಉತ್ಸವ ಕೃಷ್ಣಾಷ್ಟಮಿಯೇ ಎಂದು ತಿಳಿಯಬೇಕು. ಕೃಷ್ಣಾಷ್ಟಮಿಗಿಂತ ಮೊದಲು ಯಾವ ಬೀಧಿ ಉತ್ಸವಗಳು ಇಲ್ಲ. ನಂತರ ಮಾಯ ಪ್ರಭಾವದಿಂದ ಒಂದೊಂದಾಗಿ ತಯಾರಾಗಿವೆ. ಅದರಲ್ಲಿ ವಿನಾಯಕಚವಿತಿ ಒಂದು, ನಂತರ ದುರ್ಗಾಷ್ಟಮಿ ಎರಡನೆಯದು. ವಿಶೇಷ ಏನೆಂದರೆ ಕೃಷ್ಣನ ಹಬ್ಬ ಅಷ್ಟಮಿ ತಿಥಿ ಹೆಸರಿನಿಂದ ಇರುವಾಗ ಅದಕ್ಕೆ ವಿಶೇಷವಾಗಿ ತಿಥಿಗಳ ಹೆಸರಿನಿಂದಲೇ ವಿನಾಯಕ ಚವತಿ, ದುರ್ಗಾಷ್ಟಮಿ ಬೀಧಿ ಹಬ್ಬಗಳು ತಯಾರಾಗಿವೆಂದು ಗ್ರಹಿಸಬೇಕು.

ಕೃಷ್ಣಾಷ್ಟಮಿಗೆ ಬದಲಾಗಿ ಮೊದಲು ತಯಾರಾದ ಹಬ್ಬ ವಿನಾಯಕ ಚವತಿಯಾಗಿದ್ದು, ನಂತರ ಇತ್ತೀಚಿನ ಕಾಲದಲ್ಲಿ ದುರ್ಗಾದೇವಿ ಹಬ್ಬವೂ ಸಹ ಬೀಧಿ ಹಬ್ಬವಾಗಿ ತಯಾರಾಗಿದೆ. ದುರ್ಗಾದೇವಿ ಹಬ್ಬ ಪೂರ್ವಕಾಲದಿಂದ ಭಕ್ತಿಯಿಂದ ಗೃಹಗಳಲ್ಲೆ ಒಂಭತ್ತು ದಿನಗಳು ಮಾಡಿಕೊಳ್ಳುತ್ತಿದ್ದರು. ದುರ್ಗಾದೇವಿಯನ್ನು ಒಂದೊಂದು ದಿನ ಒಂದೊಂದು ಅಲಂಕಾರದಿಂದ ಪೂಜಿಸುವುದು ಸಂಪ್ರದಾಯದಿಂದ ಕೂಡಿಕೊಂಡಿದೆ ಎಂದು ಹೇಳಬಹುದು. ಈಗಲೂ ಸಹ ದುರ್ಗಾದೇವಿ ಹಬ್ಬವಾದ ದಶರಾ ಸಂಪ್ರದಾಯದಿಂದ ಕೂಡಿಕೊಂಡ ಹಬ್ಬವೆಂದು ಹೇಳಬಹುದು. ಆದರೆ ವಿನಾಯಕ ಚವತಿ ಮಾತ್ರ ಯಾವ ಸಂಪ್ರದಾಯವಲ್ಲದ ಹಬ್ಬವೆಂದು ಹೇಳಬಹುದು. ನಮ್ಮ ಸಂಪ್ರದಾಯ ವಲ್ಲದ ಹಬ್ಬ ನಮ್ಮ ನಡುವೆ ಹೇಗೆ ಬಂದಿದೆ? ಎಂದು ಯೋಚಿಸಿದರೆ ಅದಕ್ಕೆ ಸ್ವಲ್ಪ ವಿವರವಿದೆ. ಅಷ್ಟಮಿಯಾಗಲಿ, ಚವತಿಯಾಗಲಿ ತಿಥಿಗಳೆಂದು ಹೇಳಿದ್ದೇವೆ

ಅಲ್ಲವೆ! ಪೂರ್ವದಲ್ಲಿ ಇಂದೂಧರ್ಮಗಳನ್ನು ತಿಳಿದ ಹಿರಿಯರು ಜ್ಯೋತಿಷ್ಯ ಶಾಸ್ತ್ರದಲ್ಲಿನ ತಿಥಿಗಳನ್ನು ತೆಗೆದುಕೊಂಡು, ಒಂದೊಂದು ತಿಥಿಗೂ ಒಂದೊಂದು ವಿಷಯ ಪ್ರಾಬಲ್ಯವನ್ನು ಕೈಗೂಡಿಸಿ, ಆ ತಿಥಿಯ ದಿನ ಆ ವಿಷಯಕ್ಕೆ ಹೆಚ್ಚಾಗಿ ಪ್ರಾಧಾನ್ಯತೆ ಕೊಡುವಂತೆ ತಿಳಿಸಿದ್ದಾರೆ. ಅದರಪ್ರಕಾರ ಚವತಿ ದಿನ ಸಮಾಜಕ್ಕೆ ಸಂಬಂಧಿಸಿದ ವಿಷಯಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಹಾಗೆ ಸಪ್ತಮಿ ಯೋಗಕ್ಕೆ, ಅಷ್ಟಮಿ ಮೋಕ್ಷಕ್ಕೆ, ದಶಮಿ ಏಕಾದಶಿ ಎರಡು ತಿಥಿಗಳು ಭಕ್ತಿ, ಜ್ಞಾನಕ್ಕೆ, ಅಮವಾಸ್ಯೆ ಪೌರ್ಣಿಮೆ ಎರಡು ಪರಮಾತ್ಮ ವಿಷಯಕ್ಕೆ ಪ್ರಾಧಾನ್ಯತೆ ಕೊಡುವವೆಂದು ನಿರ್ಣಯಿಸಿದ್ದಾರೆ. ಹೀಗೆಯೇ ಚವತಿ ದಿನದ ಹಬ್ಬಗಳಾದ ನಾಗಚವತಿ, ವಿನಾಯಕಚವತಿ ಎರಡು ಸಮಾಜವೊಂದರ ಶ್ರೇಯಸ್ಸಿನ ವಿಷಯವನ್ನು ತಿಳಿಸುವವುಗಳಾಗಿ ಏರ್ಪಾಟು ಮಾಡಿದ್ದಾರೆ. ಮೊದಲು ನಾಗಚವತಿಯನ್ನು ಕುರಿತು ಹೇಳಿಕೊಂಡರೆ, ಅದೇ ವಿಧಾನದ ಪ್ರಕಾರ ವಿನಾಯಕಚವತಿ ಸಹ ಅರ್ಥವಾಗುತ್ತದೆ. ಆಗ ಜ್ಞಾನಕ್ಕೂ, ಮಾಯೆಗೂ ವ್ಯತ್ಯಾಸ ತಿಳಿಯಬೇಕೆಂದರೆ ವಿನಾಯಕ ಚವತಿಯನ್ನು ಕುರಿತು ವಿವರಿಸಿಕೊಳ್ಳಬೇಕು. ವಿನಾಯಕಚವತಿಯನ್ನು ಕುರಿತು ಸತ್ಯವನ್ನು ಹೇಳಿದಲ್ಲಿಯೂ ಮಾಯೆ ಪ್ರಭಾವದಿಂದ ಮನುಷ್ಯರು ಅಪಾರ್ಥ ಮಾಡಿಕೊಳ್ಳುವ ಅವಕಾಶವಿದೆ. ಆದ್ದರಿಂದ ಅದು ಸಮಾಜಶ್ರೇಯಸ್ಸಿಗೆ ಹೇಗೆ ಸಂಬಂಧಿಸಿದೆಯೋ ಅರ್ಥ ಆಗಬೇಕೆಂದರೆ, ಮೊದಲು ನಾಗಚವತಿಯನ್ನು ಹೇಳಿಕೊಳ್ಳಬೇಕಾಗಿರುತ್ತದೆ. ನಾಗಚವತಿ (ಚತುರ್ಥಿ) ಯನ್ನು ಹಿರಿಯರು ಏಕೆ ಮನುಷ್ಯರ ಮಧ್ಯ ಏರ್ಪಾಟು ಮಾಡಿದ್ದಾರೆಂದು ವಿವರಿಸಿಕೊಂಡು ನೋಡೋಣ. ಈ ವಿವರಗಳನ್ನು ಹೇಳುವಮೊದಲು ಮತ್ತೊಂದು ಮಾತನ್ನು ಮೊದಲೇ ಹೇಳಬೇಕಾಗಿದೆ. ಅದೇನೆಂದರೆ! ನಾಗಚವತಿ ಪ್ರಜೆಗಳ ಶ್ರೇಯಸ್ಸಿಗೆ ಏರ್ಪಡಿಸಿದರೂ, ಹಿರಿಯರ ಕೆಲಸದ ಅರ್ಥ ವ್ಯರ್ಥವಾಗಿ ಹೋಗಿ ಆ ಶ್ರೇಯಸ್ಸು ಪ್ರಜೆಗಳಿಗೆ ಉಪಯೋಗಪಡುತ್ತಿಲ್ಲ. ಹಾಗೆಯೇ ವಿನಾಯಕ ಚವತಿ ಸಹ ಹಿರಿಯರು ಯೋಚಿಸಿ ಮಾಡಿ ತೋರಿಸಿದರೂ, ಮನುಷ್ಯರು ಆ ಫಲಿತವೊಂದರ ಶ್ರೇಯಸ್ಸನ್ನು ತಿಳಿದುಕೊಳ್ಳದೆ ಹೋಗುವುದಲ್ಲದೆ ಅಡ್ಡದಾರಿ ಹಿಡಿದುಹೋಗಿದ್ದಾರೆಂದು ಹೇಳುತ್ತಿದ್ದೇವೆ. ಈ ಎರಡು ಚವತಿಗಳನ್ನು ಹೇಳಿದರೆ

ಮಾತ್ರ ಕೃಷ್ಣಾಷ್ಟಮಿ ಒಂದರ ಬೆಲೆ ತಿಳಿಯದು. ಆದ್ದರಿಂದ ಇಲ್ಲಿ ನಾಗಚವತಿಯನ್ನು, ವಿನಾಯಕಚವತಿಯನ್ನು ಕುರಿತು ಹೇಳಬೇಕಾಗಿ ಬಂದಿದೆ.

# ನಾಗ ಚವತಿ

ನಾಗಚವತಿ (ಚತುರ್ಥಿ) ಯನ್ನು ಕುರಿತು ಹೇಳುತ್ತಿದ್ದೇವೆ ನೋಡಿರಿ. ಇದು ಸಮಾಜ ಶ್ರೇಯಸ್ಸಿಗೆಂದು ಹೇಳಿದ್ದೇವೆ ಅಲ್ಲವೆ! ಆದ್ದರಿಂದ ಇದನ್ನು ಓದುವ ನಿನಗೂ ಕೂಡ ಕೆಲಸಕ್ಕೆ ಬರುವುದೆ. ಆದ್ದರಿಂದ ಶ್ರದ್ಧೆಯಿಂದ ಗಮನಿಸಿರಿ. ನಾಗರ ಎಂದರೆ ಹಾವುಗಳು ಎಂದು ಅರ್ಥ, ಚವತಿ ಎಂದರೆ ನಾಲ್ಕು ಎಂದು ಅರ್ಥ. ನಾಗಚವತಿ ಎಂದರೆ ಹಾವುಗಳಿಂದ ಪೂರ್ತಿ ರಕ್ಷಣೆ ಹೊಂದುವುದೆಂದು ಅರ್ಥ. ಅಪಾಯದಿಂದ ಹೊರಬೀಳುವಂತೆ ನಡೆಯುವುದೆ ಶ್ರೇಯಸ್ಸು ಎಂದು ಹೇಳಬಹುದು. ಹಾವುಗಳ ಕಡಿತದಿಂದ ರಕ್ಷಣೆ ಹೊಂದಿದರೆ ಯಾರಿಗಾದರೂ ಅಪಾಯದಿಂದ ಹೊರ ಬಿದ್ದಂತೆ ಆಗುತ್ತದಲ್ಲವೆ! ಹಾಗೆ ಹೊರಬೀಳುವ ವಿಧಾನವಿದೆ. ಆದ್ದರಿಂದ ನಾಗಚವಿತಿ ಸಮಾಜ ಶ್ರೇಯಸ್ಸನ್ನು ತಿಳಿಸುವುದೆಂದು ಹೇಳುತ್ತಿದ್ದೇವೆ. ಭೂಮಿಮೇಲೆ 80 ಜಾತಿಗಳ ಹಾವುಗಳಿವೆ. ಎಲ್ಲಾ ಜಾತಿಗಳಿಗೂ ವಿಷ ಇರುವುದಿಲ್ಲ. 15 ಜಾತಿಗಳಿಗೆ ಮಾತ್ರ ವಿಷವಿರುತ್ತದೆ. ಅವುಗಳಲ್ಲಿ ನಾಗರ ಹಾವಿನ ಜಾತಿಯೊಂದು ಇದೆ.

ವಿಷವಿರುವ ಉಳಿದ ಜಾತಿಗಳ ಹಾವುಗಳಿಗಿಂತ ನಾಗರಹಾವಿನ ಜಾತಿಗೆ ಮನುಷ್ಯನನ್ನು ಬೇಗನೆ ಸಾಯಿಸುವ ವಿಷ ಪ್ರಭಾವವಿದೆ. ಆದ್ದರಿಂದ ಪೂರ್ವದಲ್ಲಿ ವೈದ್ಯಪಂಡಿತರು ನಾಗರಹಾವಿನ ವಿಷಕ್ಕೆ ಔಷಧಿಯನ್ನು ವೈದ್ಯವನ್ನು ಹೇಳಿದರೆ ಎಲ್ಲಾ ಜಾತಿಗಳ ಹಾವಿನ ವೈದ್ಯ ಹೇಳಿದಹಾಗೆ ಎಂದು ಯೋಚಿಸಿದ್ದಾರೆ. ಪೂರ್ವದಲ್ಲಿ ಹೆಚ್ಚಾಗಿ ಪ್ರಕೃತಿ ಸಿದ್ಧವಾದ ಗಿಡಮೂಲಿಕೆಯ ವೈದ್ಯ ಇರುತ್ತಿತ್ತು. ಹಾವಿನ ವಿಷಕ್ಕೆ ಔಷಧಿಯಾದ ಗಿಡಮೂಲಿಕೆಗಳನ್ನು ಪ್ರತಿ ಊರಿನಲ್ಲಿಯೂ ಬೆಳೆಸಬೇಕೆಂದು ಅವರು ನಿರ್ಣಯಿಸಿಕೊಂಡಿದ್ದಾರೆ. ಆ ಯೋಜನೆಯಲ್ಲಿನ

ಭಾಗವೇ ಪ್ರತಿ ಊರಿನಲ್ಲಿಯೂ ಮೊದಲು ಬೇವಿನ ಗಿಡವನ್ನು, ಅದರ ಪಕ್ಕದಲ್ಲಿಯೇ ರಾಗಿಗಿಡವನ್ನು ನೆಟ್ಟಿದ್ದಾರೆ. ಅವುಗಳ ಮುಂದೆ ನಾಗರಹಾವುಗಳ ಪ್ರತಿಮೆಗಳನ್ನು ಇಟ್ಟಿದ್ದಾರೆ. ಪೂರ್ವದಲ್ಲಿ ಪ್ರತಿ ಊರಿನಲ್ಲಿಯು ಬೇವು, ರಾಗಿಮರ ಒಂದುಕಡೆ ಇರುವುದೂ, ಅಲ್ಲಿ ಬಹಳಜನ ವಿಶ್ರಾಂತಿ ತೆಗೆದುಕೊಳ್ಳುವಂತೆ ವಿಶಾಲವಾದ ಕಟ್ಟೆಯನ್ನು ಕಟ್ಟುವುದೂ, ಆ ಕಟ್ಟೆಯ ಮೇಲೆ ಗಿಡದ ಮುಂಭಾಗದಲ್ಲಿಯೇ  ನಾಗ ಪ್ರತಿಮೆಗಳನ್ನಿಡುವುದು ನಡೆಯುತ್ತಿತ್ತು. ಆ ವಿಧವಾಗಿ ನಿರ್ಮಿಸಲ್ಪಟ್ಟಿರುವುದನ್ನು ನಾಗರಕಟ್ಟೆ ಎನ್ನುವರು. ಈಗಲೂ ಕೆಲವು ಊರುಗಳಲ್ಲಿ ರಾಗಿ, ಬೇವಿನಮರಗಳಿರುವ ನಾಗರಕಟ್ಟೆಗಳು ಕಾಣಿಸುತ್ತವೆ. ಇತ್ತೀಚಿನ ಕಾಲದಲ್ಲಿ ತಯಾರಾದ ಕೆಲವು ಊರುಗಳಲ್ಲಿ ನಾಗರಕಟ್ಟೆಗಳು ಇಲ್ಲ. ನಾಗರಕಟ್ಟೆಗಳು ಕೆಲವು ಊರುಗಳಲ್ಲಿ ಏಕೆ ಇಲ್ಲವೊ ನಂತರ ತಿಳಿದುಕೊಳ್ಳೋಣ.

ಹಾವು ಕಚ್ಚಿದ ನಂತರ ವಿಷ ತಲೆಗೆ ಏರಿದರೆ ಮೊದಲು ನಾಲಿಗೆಗೆ ರುಚಿ ತಿಳಿಯದೆ ಹೋಗುತ್ತದೆ. ನಾಲಿಗೆ ತಿಳಿದುಕೊಳ್ಳುವ ಆರು ರುಚಿಗಳಲ್ಲಿ ಕಹಿ ತಿಳಿಯದಹಾಗೆ ಹೋಗುತ್ತದೆ. ಅಂಥಹ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕೆ ಕಹಿ ರುಚಿ ಇರುವ ಬೇವಿನಮರವನ್ನು ನಾಗರಕಟ್ಟೆಯಲ್ಲಿ ಬೆಳೆಸಿದ್ದಾರೆ. ವಿಷ ತಲೆಗೇರಿದ ನಂತರ ಅದನ್ನು ಸುಲಭವಾಗಿ ತೆಗೆದುಹಾಕುವುದಕ್ಕೆ ಸಾಧ್ಯವಾಗುತ್ತದೆ. ಆದ್ದರಿಂದ ಹಾವುಕಚ್ಚಿದ ವ್ಯಕ್ತಿಗೆ, ವಿಷ ತಲೆಗೆ ಏರಿದೆಯಾ ಅಥವಾ ಇಲ್ಲವಾ ಎಂದು ಪರೀಕ್ಷಿಸುವುದಕ್ಕೆ ಬೇವಿನ ಎಲೆಯನ್ನು ಜಗಿಸುತ್ತಾರೆ. ವಿಷ ಏರಿದಾಗ ಕಹಿ ತಿಳಿಯದಂತೆ ಹೋಗುವುದರಿಂದ ಆಗ ತಲೆಯಿಂದ ವಿಷವನ್ನು ತೆಗೆದುಹಾಕುವುದಕ್ಕೆ ಪ್ರಯತ್ನಿಸಬಹುದು. ಬೇವಿನ ಎಲೆಗಳ  ಮೂಲಕ ವಿಷವನ್ನು ತಿಳಿದುಕೊಂಡವರು, ವಿಷವನ್ನು ತೆಗೆದುಹಾಕುವುದಕ್ಕೆ ರಾಗಿ ಎಲೆಗಳನ್ನು ಬಳಸಿಕೊಳ್ಳುತ್ತಾರೆ. ರಾಗಿ ಎಲೆಗಳ ಕಾಂಡಗಳನ್ನು ವಿಷವಿರುವವನಿಗೆ ಕಿವಿಗಳಲ್ಲಿ ಇಟ್ಟರೆ, ರಾಗಿ ಎಲೆಗಳು ತಮ್ಮ ಕಾಂಡಗಳ ಮೂಲಕ ತಲೆಯಲ್ಲಿನ ವಿಷವನ್ನು ಎಲೆಯೊಳಗೆ ಸೆಳೆದುಕೊಳ್ಳುತ್ತದೆ. ಆ ವಿಧವಾಗಿ ಎರಡು ಇಲ್ಲವೆ ಮೂರು ಜೊತೆಗಳ ಎಲೆಗಳಿಂದ ಪೂರ್ತಿ ವಿಷವನ್ನು ತೆಗೆದುಹಾಕಬಹುದು. ನಂತರ

ಬೇವಿನ ಎಲೆಯನ್ನು ಜಗಿಸಿದರೆ ಅದು ಕಹಿಯಾಗಿರುವುದರಿಂದ ವಿಷ ಇಳಿದುಹೋಗಿದೆಯೆಂದು ತಿಳಿದುಕೊಳ್ಳಬಹುದು. ವಿಷವನ್ನು ಸೆಳೆದುಕೊಳ್ಳುವ ರಾಗಿಎಲೆ ಹಾವಿನ ಎಡೆಯಂತಿರುವುದು, ಕೆಳಗೆ ಎಲೆಯ ಕೊನೆ ಹಾವಿನ ಬಾಲದಂತಿರುವುದನ್ನು ಗಮನಿಸಬಹುದು. ಇದನ್ನನುಸರಿಸಿಯೇ ಪ್ರತಿ ಎಲೆ ಒಂದು ಹಾವಿಗೆ ಸಮಾನವೆಂದು, ಹಾವಿನ ವಿಷವನ್ನು ಹಾವೆ ಸೆಳೆದುಕೊಂಡಂತೆ, ರಾಗಿ ಎಲೆ ವಿಷವನ್ನು ಸೆಳೆದುಕೊಳ್ಳುತ್ತಿದೆಯೆಂದು ತಿಳಿಯುತ್ತಿದೆ. ಈ ವೈದ್ಯ ವಿಧಾನ ಎಲ್ಲರಿಗೂ ತಿಳಿಯುವಂತೆ, ಪೂರ್ವದಲ್ಲಿ ಪ್ರತಿ ಊರಿನಲ್ಲಿ ರಾಗಿ, ಬೇವಿನಗಿಡವನ್ನು ಬೆಳೆಸಿ ಅವುಗಳಿಗೆ ಕಟ್ಟೆಗಳನ್ನು ಕಟ್ಟಿಸುತ್ತಿದ್ದರು. ಅದೇ ಮರಗಳ ಕೆಳಗೆ ನಾಗರಹಾವಿನ ಪ್ರತಿಮೆಗಳನ್ನು ಸಹ ಇಡುವುದಕ್ಕೆ ಕಾರಣ ಏನೆಂದರೆ! ಈ ಹಾವುಗಳು ಕಚ್ಚಿದರೆ ಈ ಮರದ ಎಲೆಗಳೆ ವೈದ್ಯವೆನ್ನುವಂತೆ ಮರಗಳ ಕೆಳಗೆ ಮುಂದೆಯೇ ಹಾವಿನ ಬೊಂಬೆಗಳನ್ನಿಟ್ಟಿದ್ದಾರೆ. **"ಪ್ರತಿ ಎಲೆ ಔಷಧವೆಂದು"** ನಾಣ್ಣುಡಿ ಇದೆ. ರಾಗಿ, ಬೇವಿನ ಎಲೆ ಏತಕ್ಕೆ ಔಷಧಿ ಎಂದು ಪ್ರಶ್ನೆ ಹಾಕಿದರೆ ತಕ್ಷಣ ಹಾವುಗಳಿಗೆ ಎಂದು ತಿಳಿಯುವಂತೆ ಆ ಮರಗಳ ಕೆಳಗೆ ಹಾವುಗಳ ಪ್ರತಿಮೆಗಳನ್ನಿಟ್ಟಿದ್ದಾರೆ. ಪ್ರತಿ ಊರಿನಲ್ಲಿಯು ಆ ವಿಧವಾಗಿ ಇದ್ದಲ್ಲಿ, ಎಲ್ಲರಿಗೂ ಆ ವೈದ್ಯ ವಿಧಾನ ತಿಳಿದು, ಎಲ್ಲರೂ ಹಾವಿನಕಡಿತದಿಂದ ಹೊರಬೀಳುತ್ತಾರೆಂದು ಆದಿನದ ಹಿರಿಯರು ತಿಳಿದಿದ್ದಾರೆ.

ಪ್ರಸ್ತುತ ಕಾಲದಲ್ಲಿ ಆದಿನದ ಹಿರಿಯರ ಉದ್ದೇಶ ತಿಳಿಯದಂತೆ ಹೋಗಿದೆ. ಈಗಲೂ ಕೆಲವು ಊರುಗಳಲ್ಲಿ ನಾಗರಕಟ್ಟೆಗಳು, ರಾಗಿ, ಬೇವಿನಮರ ಗಳು ಸಾಮೇತವಾಗಿ ಇದ್ದಲ್ಲಿಯೂ ಅವು ವೈದ್ಯ ವಿಧಾನವಾಗಿ ಇಟ್ಟಿರುವವೆಂದು ರಾಗಿ, ಬೇವಿನಮರಗಳು ಹಾವಿನ ವಿಷಕ್ಕೆ ಒಳ್ಳೆಯ ಔಷಧಗಳೆಂದು ಯಾರಿಗೂ ತಿಳಿಯದು. ವಿಷಕ್ಕೆ ಪ್ರತೀಕವಾಗಿ ಹಾವಿನ ಬೊಂಬೆಗಳನ್ನೂ, ಔಷಧಕ್ಕೆ ಪ್ರತೀಕವಾಗಿ ರಾಗಿ, ಬೇವಿನಮರಗಳನ್ನು ಇಟ್ಟರೆ ಆ ಬಾವಾರ್ಥ ಕಾಲಗರ್ಭದಲ್ಲಿ ತಿಳಿಯ ದಂತಾಗಿದೆ. ಹಾವಿನ ಪ್ರತಿಮೆಗಳು ನಾಗದೇವತೆಗಳಾಗಿ, ಬೇವು, ರಾಗಿಮರಗಳು ಲಕ್ಷೀನಾರಾಯಣರಾಗಿ ಭಾವಿಸಿ ಪ್ರಜೆಗಳು ಪೂಜೆಗಳು ಮಾಡುತ್ತಿದ್ದಾರೆ. ಈ

ರೀತಿಯಾಗಿ ವೈದ್ಯವು ಭಕ್ತಿಯಾಗಿ ಮಾರ್ಪಟ್ಟಿದೆ. ಹಾವಿನ ಪ್ರತಿಮೆಗಳಿಗೆ ರಾಗಿ, ಬೇವಿನಮರಗಳು ನೆರಳಿಗೋಸ್ಕರವೆ ಇವೆಯೆಂದುಕೊಂಡ ಪ್ರಜೆಗಳು, ಪ್ರತಿಮೆಗಳನ್ನು ಮರ ಗಿಡಗಳ ಕೆಳಗೆ ಇಲ್ಲದಂತೆ ಗುಡಿಗಳಲ್ಲಿಯೂ ಪ್ರತಿಷ್ಠಿಸುವುದನ್ನು ಶುರುಮಾಡಿದ್ದಾರೆ. ಹೀಗಾಗಿ ನಾಗಪ್ರತಿಮೆಗಳು ಈಗಿನಕಾಲದಲ್ಲಿ ಗುಡಿಗಳಲ್ಲಿ ಕಾಣಿಸುತ್ತಿವೆ. ಗ್ರಾಮಗಳಲ್ಲಿ ರಾಗಿ, ಬೇವಿನಮರಗಳು ಜೊತೆಯಾಗಿ ಇರುವುದು ಕಾಣಿಸದಂತೆ ಮಾಯವಾಗುತ್ತಿವೆ. ಇವು ಪ್ರಾಣ ತೆಗೆಯುವ ಹಾವುಗಳೆಂದು ಹಾವಿನ ಪ್ರತಿಮೆಗಳನ್ನು, ಇವು ಪ್ರಾಣ ಕೊಡುವ ಮರಗಳೆಂದು ರಾಗಿ, ಬೇವಿನಮರಗಳನ್ನು ಎಲ್ಲರಿಗೂ ತಿಳಿಯವಹಾಗೆ ಪೂರ್ವದಲ್ಲಿ ಬಹಳ ತಿಳುವಳಿಕೆಯಿಂದ ವೈದ್ಯಪಂಡಿತರು ಇಟ್ಟಿದ್ದರೆ, ಪ್ರಾಣ ತೆಗೆಯುವ ಹಾವುಗಳು ದೇವತೆಗಳ ಸ್ಥಾನದಲ್ಲಿ ಇವೆ. ಪ್ರಾಣ ಕೊಡುವ ಔಷಧಿಮರಗಳು ವಿನಾಶದಂಚಿನಲ್ಲಿವೆ. ಹಾವುಗಳನ್ನು ಕುರಿತು, ಔಷಧಿವೃಕ್ಷಗಳನ್ನು ಕುರಿತು ಚರ್ಚಾವೇದಿಕೆಗಳನ್ನು ನಾಗರಕಟ್ಟೆಗಳ ಮೇಲೆ ನಡೆಸಿ ಪ್ರಜೆಗಳಿಗೆ ವೈದ್ಯ ವಿಧಾನ ತಿಳಿಸುವುದಕ್ಕೆ ನಾಗರಚವತಿ ಎಂಬ ಹೆಸರಿನಿಂದ ಶ್ರಾವಣಮಾಸ ಶುಕ್ಲಪಕ್ಷ ಚವತಿಯನ್ನು ಪೂರ್ವದಲ್ಲಿ ನಿರ್ಣಯಿಸಿದ್ದಾರೆ. ಮೊದಲು ವೈದ್ಯಪಂಡಿತರು ಇಟ್ಟಿರುವ ಉದ್ದೇಶ ಕಾಲಕ್ರಮವಾಗಿ ಮರೆತುಹೋಗಿ, ಕೊನೆಗೆ ನಾಗಚವತಿ ಒಂದು ಭಕ್ತಿ ಹಬ್ಬವಾಗಿ ಮಾರ್ಪಟ್ಟಿದೆ. ನಮ್ಮ ಹಿರಿಯರು ನಮ್ಮ ಶ್ರೇಯಸ್ಸನ್ನು ಕೋರಿ ಒಂದು ಅಮೋಘವಾದ ಔಷಧವನ್ನು ಕೊಟ್ಟರೆ ಅದನ್ನು ತಿಳಿದುಕೊಳ್ಳದೆ ಕಾಲಗರ್ಭದಲ್ಲಿ ಅವರ ಉದ್ದೇಶವನ್ನು ಸಮಾಧಿ ಮಾಡಿದ್ದೇವೆ. ಹಿರಿಯರು ನೀಡಿರುವ ಫಲಿತವನ್ನು ನಾವು ಹೇಳಿದಾಗಲೂ ಈಗಲೂ ಸಹ ಅರ್ಥ ಮಾಡಿಕೊಳ್ಳದೆ ಅಡ್ಡಮಾತು ಮಾತನಾಡುವವರಿದ್ದಾರೆ. ಪೂರ್ವದಲ್ಲಿ ಸಮಾಜ ಶ್ರೇಯಸ್ಸಿಗೆ ನಮ್ಮವರು ತಿಳಿಸಿದ ವಿಧಾನಕ್ಕೆ ನಾವು ಎಷ್ಟೋ ಕೃತಜ್ಞರಾಗಿ ಇರಬೇಕು. ಹಾಗಲ್ಲದೆ ಅವರು ತಿಳಿಸಿದ ವಿಧಾನವನ್ನು ಗಾಳಿಗೆ ಬಿಟ್ಟಿದ್ದೇವೆ. ಎಂದೋ ತಿಳಿಯದಿರುವ ವೈದ್ಯ ವಿಧಾನ ಈ ದಿನ ತಿಳಿಸಿದರೂ, ಇದು ನಮ್ಮ ಶ್ರೇಯಸ್ಸಿಗೆ ಸಂಬಂಧಿಸಿರುವುದೆಂದು ಸಹ ತಿಳಿಯುತ್ತಿಲ್ಲ. ಈದಿನ ತಿಳಿಯದಿರುವ ವಿಚಾರವನ್ನು ತಿಳಿಸಿದವರಾಗಲಿ, ಆದಿನ ಎಷ್ಟೋ ಪರಿಶೋಧನೆ ಮಾಡಿ ತಿಳಿಸಿದವರಾಗಲಿ

ಯಾವ ಫಲಿತವನ್ನೂ ಬಯಸಿ ತಿಳಿಸಲಿಲ್ಲವೆಂದು ಸ್ವಲ್ಪವಾದರೂ ಸೂಕ್ಷ್ಮವಾಗಿ ಯೋಚಿಸದೆ, ಮೂಢವಾಗಿ ನಾಗದೇವತೆಗಳ ಪೂಜೆಯನ್ನು ಬಿಡಿಸುವುದೆ ಇವರ ಉದ್ದೇಶವೆಂದು, ಇವರು ಹಿಂದೂಗಳೇ ಅಲ್ಲವೆಂದು ನಮ್ಮನ್ನು ಕರೆಯುವುದು ಸರಿಯಾದ ಪದ್ಧತಿಯೇನಾ ಎಂದು ನೀವೆ ಯೋಚಿಸಿರಿ. ಒಳ್ಳೆಯದು ಯಾವುದೊ ಕೆಟ್ಟದು ಯಾವುದೊ ತಿಳಿಯದಂತೆ, ನಿಸ್ವಾರ್ಥವಾಗಿ ಸಮಾಜ ಶ್ರೇಯಸ್ಸು ಕೋರುವವರ ಬಗ್ಗೆ ತಪ್ಪಾಗಿ ಮಾತನಾಡುವವರು ಸಹ ಇಂದು ಇದ್ದಾರೆ. ಆದ್ದರಿಂದ ಈಗ ಓದುತ್ತಿರುವ ನೀವಾದರೂ ಸತ್ಯವನ್ನು ತಿಳಿದುಕೊಳ್ಳಿ ಎಂದು ಕೋರುತ್ತಿದ್ದೇವೆ.

# ವಿನಾಯಕ ಚವತಿ

ಇಲ್ಲಿಯವರೆಗೂ ನಾಗಚವತಿಯನ್ನು ಕುರಿತು ಹೇಳಿದ್ದೇವೆ, ಈಗ ವಿನಾಯಕಚವತಿ(ಚತುರ್ಥಿ) ಕುರಿತು ಹೇಳುತ್ತಿದ್ದೇವೆ. ಈ ವಿಷಯವನ್ನು ಕೂಡ ಅಪಾರ್ಥ ಮಾಡಿಕೊಳ್ಳುವುದಕ್ಕೆ ಅನೇಕ ಅವಕಾಶಗಳು ಇವೆ. ಆದ್ದರಿಂದ ಓದುತ್ತಿರುವ ಪ್ರತಿ ಅಂಶವನ್ನು ಜಾಗ್ರತೆಯಿಂದ ಗಮನಿಸಬೇಕೆಂದು ಕೋರುತ್ತಿದ್ದೇವೆ. ಒಬ್ಬ ಮನುಷ್ಯ ಸಕ್ರಮಮಾರ್ಗದಲ್ಲಿ ನಡೆಯಬೇಕೆಂದರೆ ಮನುಷ್ಯನಿಗೆ ಆಧ್ಯಾತ್ಮಿಕ ವಿಕಾಸ, ವ್ಯಕ್ತಿತ್ವ ವಿಕಾಸ, ಸಾಮಾಜಿಕ ವಿಕಾಸ ಅಗತ್ಯವೆಂದು ತಿಳಿದ ಹಿರಿಯರು ಆ ಮೂರು ವಿಧಾನಗಳನ್ನು ಹಬ್ಬಗಳ ರೂಪದಲ್ಲಿ ತಿಳಿಸುತ್ತಾ, ಎಲ್ಲವುಗಳಿಗಿಂತ ಆಧ್ಯಾತ್ಮಿಕತೆಗೆ ಬಹು ಮುಖ್ಯವಾದ ಪ್ರಾಧಾನ್ಯತೆಕೊಟ್ಟಿದ್ದಾರೆ. ಈಗ ನಾವು ಹೇಳಿಕೊಂಡ ಮತ್ತು ಹೇಳಿಕೊಳ್ಳುವ ಹಬ್ಬಗಳೆಲ್ಲ ಹಿಂದೂ(ಇಂದೂ) ಮತದಲ್ಲಿಯೇ ಇವೆ. ಪೂರ್ವದಲ್ಲಿ ಹಿಂದೂ ಸಂಸ್ಕೃತಿಗೆ ಬಹಳ ಮಹತ್ವವಾದ ಅರ್ಥ ಇರುತ್ತಿತ್ತು. ಇಂದಿನ ಕಾಲದಲ್ಲಿ ಹಿಂದೂ ಸಂಸ್ಕೃತಿಯನ್ನೆ ಬೇರೆ ಸಂಸ್ಕೃತಿಯಾಗಿ, ಬೇರೆ ಸಂಸ್ಕೃತಿಯನ್ನೆ ಹಿಂದೂ ಸಂಸ್ಕೃತಿಯಾಗಿ ಭಾವಿಸಿಕೊಳ್ಳುವ ಹಿಂದೂಗಳು ತಯಾರಾಗಿದ್ದಾರೆ. ಈ ನಮ್ಮ ಮಾತನ್ನು ನೀವು ನಂಬಲಾರದೆ ಹೋದರೆ, ನಾವು ಹೇಳುವ ಪ್ರತ್ಯಕ್ಷ ಪ್ರಮಾಣವನ್ನು ನೋಡಿದ ನಂತರವಾದರೂ

ನಮ್ಮ ಮಾತು ನಿಜವೆಂದು ನಂಬಲೇ ಬೇಕಾಗುತ್ತದೆ. ಕ್ರೀಸ್ತಶಕ 2008, 8ನೇ ತಿಂಗಳು, 8ನೇ ತಾರೀಖು, 8 ಗಂಟೆಗಳ, 8 ನಿಮಿಷಗಳಿಗೆ ಒಳ್ಳೆಯ ಮುಹೂರ್ತ ಇದೆಯೆಂದು, ಆ ರೀತಿಯಾಗಿ ವರ್ಷದಿಂದ ಹಿಡಿದು ತಿಂಗಳು, ದಿನ ಎಲ್ಲಾ 8 ಸಂಖ್ಯೆ ಆಗುವುದು ವಿಶೇಷವೆಂದು, ಅನೇಕ ದೇಶಗಳು ಇದನ್ನು ಶುಭದಿನವಾಗಿ ಪಾಲಿಸುತ್ತಿವೆಂದು, ಪ್ರಪಂಚ ವ್ಯಾಪ್ತವಾಗಿ ಬಹಳಷ್ಟು ವಿವಾಹಗಳು ನಡೆಯುತ್ತಿವೆ, ಚೈನಾದಲ್ಲಿ ಒಲಂಪಿಕ್ಸ್ ಉತ್ಸವಗಳು ಸಹ ಈ ದಿನವೇ ಪ್ರಾರಂಭಿಸುತ್ತಿದ್ದಾರೆಂದು, ಟಿವಿ 9 ಅವರು ಚರ್ಚಾವೇದಿಕೆ ಇಟ್ಟು ಅದರಲ್ಲಿ ಜ್ಯೋತಿಷ್ಯಶಾಸ್ತ್ರ ಪಂಡಿತರನ್ನು, ಸಂಖ್ಯಾಶಾಸ್ತ್ರಪಂಡಿತರನ್ನು ಸೇರಿಸಿ ಅವರ ಚರ್ಚೆಯನ್ನು ಆಗಷ್ಟು 8ನೇ ತಾರೀಖು ಉದಯ 8 ಗಂಟೆಗಳಿಗೆ ಪ್ರಸಾರ ಮಾಡಿದ್ದಾರೆ. ಆ ಚರ್ಚೆಯಲ್ಲಿ ಒಂದು ಸಂದರ್ಭದಲ್ಲಿ ಕಲಿಯುಗ 4,32,000 ವರ್ಷಗಳ ಪರಿಮಿತಿಯಿಂದ ಇದೆ. ಆ ಸಂಖ್ಯೆಯಲ್ಲಿ ಈಗ ಕಳೆದಿರುವುದು ಕೇವಲ 2000 ವರ್ಷಗಳು ಮಾತ್ರವೆ, ಇನ್ನೂ ಕಳೆಯಬೇಕಾಗಿರುವುದು ಎಷ್ಟೋ ಇದೆಯೆಂದು ಸ್ವತಃ ಪಂಡಿತರೆ ಅಂದಿದ್ದಾರೆ. ಆ ವಿಷಯವನ್ನು ಪಕ್ಕದಲ್ಲೆ ಇರುವ ಮತ್ತೊಬ್ಬ ಜ್ಯೋತಿಷ್ಯ ಪಂಡಿತರು ಯಾವಮಾತ್ರವೂ ಇದನ್ನು ಖಂಡಿಸದೆ ಟಿವಿ 9 ಅವರು ಸಹ ತಟಸ್ಥರಾದ್ದಾರೆ. ಅಲ್ಲಿ ಕುಳಿತುಕೊಂಡ ಇಬ್ಬರು ಜ್ಯೋತಿಷ್ಯಪಂಡಿತರು, ಟಿವಿ 9 ಅವರು ಎಲ್ಲರೂ ಹಿಂದೂಗಳೆ! ಆದಲ್ಲಿಯೂ ಯಾರೂ ತುಟಿ ಬಿಚ್ಚಲಿಲ್ಲ. ಅಲ್ಲಿ ಕಲಿಯುಗ ಒಂದರ ಕಾಲ ಪರಿಮಾಣ 4,32,000 ವರ್ಷಗಳು ಅದಾಗ, ದ್ವಾಪರಯುಗ 8,64,000 ವರ್ಷಗಳು ಕಳೆದುಹೋಗಿ, ಕಲಿಯುಗ ಪ್ರಾರಂಭವಾಗಿ 5108 ವರ್ಷಗಳು ಕೂಡಾ ಕಳೆದುಹೋಗಿದೆ, 5109ನೇ ವರ್ಷ ನಡೆಯುತ್ತಿದೆ. ಇಸ್ರಾಯಿಲ್‌ದೇಶದಲ್ಲಿ ಹುಟ್ಟಿದ ಯೇಸುಪ್ರಭುವು ಮರಣಿಸಿ ಕ್ರೀಸ್ತಶಕ ಪ್ರಾರಂಭವಾಗಿ 2007 ವರ್ಷಗಳು ಕಳೆದು, 2008 ವರ್ಷದಲ್ಲಿ 7 ತಿಂಗಳು ಸಹ ಮುಗಿದುಹೋಗಿ 8ನೇ ತಿಂಗಳು ನಡೆಯುತ್ತಿದೆ. ಅಂತಹದರಲ್ಲಿ ಹಿಂದೂಗಳ ಧರ್ಮದ ಪ್ರಕಾರ ಯುಗಗಳ ಕಾಲಪರಿಮಾಣ ಇರುವಾಗ, ಅದರಲ್ಲಿ ಕಲಿಯುಗ ಕಾಲಪರಿಮಾಣ 4,32,000 ವರ್ಷಗಳು ಅಂದಾಗ ಕಳೆದಿರುವುದು 5108 ವರ್ಷಗಳ ನಾಲ್ಕು ತಿಂಗಳೇ ಆದಾಗ, ಕ್ರೈಸ್ತ ಮತಸ್ಥರ ಕ್ರೀಸ್ತಶಕ ಒಂದರ ವರ್ಷಗಳನ್ನು

ಹೇಳಿಕೊಳ್ಳುವುದು ತಪ್ಪಲ್ಲವೆ! ಬ್ರಾಹ್ಮಣನನ್ನು ಪ್ರಸ್ತಾವಿಸಿ ಆತನ ಹೆಸರು ಡೇವಿಡ್‌ಬ್ರಸ್ ಎಂದು ಹೇಳಿದಹಾಗೆ, ಕಲಿಯುಗ ಕಾಲಪ್ರಮಾಣವನ್ನು ಪ್ರಸ್ತಾವಿಸಿ, ಕ್ರೀಸ್ತಶಕ ಭುಕ್ತಿಯನ್ನು (ಕಳೆದಿರುವುದನ್ನು) ಹೇಳಿದರೆ ಹಿಂದೂಸಂಸ್ಕೃತಿಯನ್ನು ಬಿಟ್ಟು ಕ್ರೈಸ್ತ ಸಂಸ್ಕೃತಿಯನ್ನು ಹೇಳಿದಂತೆ ಅಲ್ಲವೆ! ಅಲ್ಲಿರುವ ಮೂವರಿಗೂ ಅದರಲ್ಲಿ ಕ್ರೈಸ್ತ ಸಂಸ್ಕೃತಿ ಕಾಣಿಸಲಿಲ್ಲವಾ! ಅವರು ಮಾತನಾಡಿರುವುದು ಹಿಂದೂಸಂಸ್ಕೃತಿಯೇನಾ?

ಇಂತಹದೇ ಮತ್ತೊಂದು ಪ್ರತ್ಯಕ್ಷ ಸತ್ಯವನ್ನು ಹೇಳುತ್ತೇನೆ ನೋಡಿರಿ. ತ್ರೈತಶಕ–30, ಕಲಿಯುಗ 5109ನೇ ವರ್ಷ, ಸರ್ವಧಾರಿ ನಾಮ ಸಂವತ್ಸರ ನಂ–22, ಚೈತ್ರಮಾಸ ತಿಂಗಳು 1, ವಸಂತಋತು ಎಂದು ಹಿಂದೂ ಸಂಸ್ಕೃತಿ ಪ್ರಕಾರ ಯುಗಾದಿಯಿಂದ ಪ್ರಾರಂಭವಾದ ಕ್ಯಾಲೆಂಡರನ್ನು ನಾವು ತಯಾರಿಸಿ ಜನವರಿ ತಿಂಗಳಿಂದ ಪ್ರಾರಂಭವಾದ ಕ್ಯಾಲೆಂಡರು ಬೇಡ, ಅದು ನಮ್ಮ ದೇಶ ಸಂಸ್ಕೃತಿ ಅಲ್ಲವೆಂದು, ಯುಗಾದಿಯಿಂದ ಪ್ರಾರಂಭವಾದ ನಮ್ಮ ಕ್ಯಾಲೆಂಡರನ್ನು ಉಚಿತವಾಗಿ ಹಂಚಿದರೆ, ಮಹಾನಂದಿಯಲ್ಲಿ ಪರಮತ ಪ್ರಚಾರವೆಂದು ಕ್ಯಾಲೆಂಡರನ್ನು ಟಿವಿಯಲ್ಲಿ ಹತ್ತಿರವಾಗಿ ತೋರಿಸಿ, ಸಾಲಾಗಿ ಮೂರು ದಿನಗಳು ಪ್ರಸಾರ ಮಾಡಿದ ಟಿವಿ 9 ಅವರಿಗೆ ನಾವು ನಮ್ಮ ಕ್ಯಾಲೆಂಡರೂ ಕ್ರೈಸ್ತವಾಗಿ ಕಾಣಿಸಿದರೆ, ತಮ್ಮ ಎದುರುಗಡೆ ಕ್ರೈಸ್ತಶಕದಲ್ಲಿನ 2000 ವರ್ಷಗಳನ್ನು ಕಲಿಯುಗದಲ್ಲಿ ಕಳೆದ ವರ್ಷಗಳಾಗಿ ಹೇಳುವವರು ಹಿಂದೂಗಳಾಗಿ ಕಾಣಿಸಿದ್ದಾರೆಯೇ? ಹಿಂದೂ ಧರ್ಮವನ್ನು ಹೇಳುವವರನ್ನು ಕ್ರೈಸ್ತರಾಗಿ, ಕ್ರೈಸ್ತವನ್ನು ಹೇಳುವವರನ್ನು ಹಿಂದೂಗಳಾಗಿ ಟಿವಿ 9 ಅವರು ಪ್ರಚಾರ ಮಾಡುವುದು ನೋಡಿದರೆ ನಿಮಗೇನನಿಸುತ್ತದೊ ಯೋಚಿಸಿರಿ. ಟಿವಿ 9 ಅವರು ಯುಗಾದಿಯಿಂದ ಪ್ರಾರಂಭವಾದ ನಮ್ಮ ಕ್ಯಾಲೆಂಡರನ್ನು ಪರಮತ ಪ್ರಚಾರವೆಂದು ಟಿವಿಯಲ್ಲಿ ಕ್ಲೋಸಪ್‌ನಲ್ಲಿ ತೋರಿಸಿದಾಗ, ಅದರಲ್ಲಿನ ವಾಸ್ತವವೆಷ್ಟು ಎಂದು ಯೋಚಿಸದೆಯೇ ಕೆಲವರು ಹಿಂದೂಗಳು ನಮ್ಮ ಕ್ಯಾಲೆಂಡರ್‌ಗಳನ್ನು ಅನಂತಪುರ ಜಿಲ್ಲೆ ಗುಂತಕಲ್ಲುನಲ್ಲಿ ಬೆಂಕಿ ಇಟ್ಟು

ಸುಟ್ಟುಹಾಕಿದ್ದಾರೆ. ಮೆರುಗಾದ ಸಮಾಜಕ್ಕೋಸ್ಕರ ಟಿವಿ 9 ಎನ್ನುವವರು ಅಸತ್ಯವನ್ನು ಪ್ರಸಾರ ಮಾಡಬಹುದಾ? ಇದೆಲ್ಲವು ನೋಡಿದರೆ ಹಿಂದೂಗಳು ಹಿಂದೂತ್ವವನ್ನು ಗುರುತಿಸಲಾರದೆ ಕುರುಡರಂತೆ ಇದ್ದಾರೊ ಇಲ್ಲವೊ ನೀವೇ ಯೋಚಿಸಿರಿ.

ಇನ್ನೊಂದು ವಿಷಯವನ್ನು ಹೇಳುತ್ತೇನೆ ನೋಡಿರಿ. ಪಂಚಾಂಗ, ನವಗ್ರಹಗಳು, ಜ್ಯೋತಿಷ್ಯ ಪೂರ್ವದಿಂದ ಹಿಂದೂಗಳು ಕಂಡುಹಿಡಿದಿರುವವೆ, ಹಿಂದೂಗಳು ಲೆಕ್ಕಿಸುತ್ತಿರುವವು. ಹಿಂದೂಗಳು ಕರ್ಮ ಸಿದ್ಧಾಂತವನ್ನನುಸರಿಸಿ ಗ್ರಹಚಾರವಿರುತ್ತದೆಂದು ಆಧ್ಯಾತ್ಮಿಕದಲ್ಲಿಯೂ ಸಹ ಹೇಳಿಕೊಂಡಿದ್ದೇವೆ. ಅಂತಹದ್ದು ಕ್ರಿಸ್ತಶಕ 2008, 8ನೇ ತಿಂಗಳು, ತಾರೀಖು 8 ಪ್ರಚಾರ ಹಿಂದೂಗಳಿಗೆ ಒಳ್ಳೆಯದಿನ ಹೇಗಾಗಿದೆ. ಆ ಮೂರು 8 ಗಳು ಒಂದೇಬಾರಿ ಕಲಿತು ಬರುವುದು ಕ್ರೈಸ್ತರಿಗೆ ಒಳ್ಳೆಯದು ಆಗಬಹುದೇನೊ ಆಗಲಿ, ಹಿಂದೂಗಳಿಗೆ ಆ ದಿನವೇಗೆ ಒಳ್ಳೆಯದಾಗಿದೆ? ಜ್ಯೋತಿಷ್ಯಶಾಸ್ತ್ರದ ಪ್ರಕಾರ ಆ ದಿನಕ್ಕೆ ಯಾವ ಪ್ರತ್ಯೇಕತೆ ಇಲ್ಲ. ಅಂತಹದರಲ್ಲಿ ಆ ದಿನವನ್ನು ಕುರಿತು ಪ್ರತ್ಯೇಕವಾಗಿ ಟಿವಿಯಲ್ಲಿ ಪ್ರಚಾರ ಮಾಡಿ ಮಾತನಾಡುವುದು ಕ್ರೈಸ್ತಶಕ 2008ನ್ನು ಕುರಿತು ಹೊಗಳಿದಂತೆ ಅಲ್ಲವೆ? ಹಿಂದೂಗಳ ಪಂಚಾಗದ ಪ್ರಕಾರ ಇದು 8ನೇ ವರ್ಷ ಅಲ್ಲ, 8ನೇ ತಿಂಗಳು ಅಲ್ಲ, 8ನೇ ದಿನವು ಅಲ್ಲ. ಅಂತಹದರಲ್ಲಿ ಕ್ರೈಸ್ತರ ಮೂರು ಎಂಟುಗಳನ್ನು ಕುರಿತು ಮಾತನಾಡುವವರು ಹಿಂದೂಗಳಾದರೆ, ನಾವು ಭಗವದ್ಗೀತೆ ಪ್ರಕಾರ ಜ್ಞಾನವನ್ನು ಹೇಳುತ್ತಾ, ಯುಗಾದಿಯಿಂದ ಕ್ಯಾಲೆಂಡರನ್ನು ತಯಾರು ಮಾಡಿದವರು, ಪರಮತಸ್ಥರಾ? ನಮ್ಮ ಯುಗಾದಿ ಕ್ಯಾಲೆಂಡರ್‌ನ್ನು ಹರಿದವರು, ಸುಟ್ಟವರು, ಕ್ರೈಸ್ತರದೆಂದು ತೋರಿಸಿದ ಟಿವಿ 9 ಅವರು, ಅವರ ಮನೆಯಲ್ಲಿ ಜನವರಿಯಿಂದ ಪ್ರಾರಂಭವಾದ ಕ್ಯಾಲೆಂಡರನ್ನು ಇಟ್ಟುಕೊಳ್ಳುವುದು ಸಮಂಜಸನಾ? ಜನವರಿ 1ನೇ ತಾರೀಖನ್ನು ಹೊಸ ವರ್ಷವೆಂದು ಸಂತೋಷಪಡುವವರು, ಆ ರಾತ್ರಿಗೆ ಟಿವಿಗಳಲ್ಲಿ ತೋರಿಸುವವರು ಪರಮತವನ್ನು ಅನುಸರಿಸಿದಂತೆ ಅಲ್ಲವೆ? ಹೀಗೆ ಕೇಳುತ್ತಾ, ವಿವರಿಸುತ್ತಾ ಹೋದರೆ

ಹಿಂದೂಮತದಲ್ಲಿ ದೈವಜ್ಞಾನ ಕಾಣಿಸದಂತೆ ಹೋಗಿ, ಹಿಂದೂಗಳು ತಮ್ಮ ಸಂಸ್ಕೃತಿಯನ್ನು, ತಮ್ಮ ಜ್ಞಾನವನ್ನು ಗುರುತಿಸಲಾರದ ಸ್ಥಿತಿಯಲ್ಲಿ ಇದ್ದಾರೆಂದು ತಿಳಿಯುತ್ತಿದೆ. ಅಂತಹ ಪರಿಸ್ಥಿತಿಯಿಂದ ಹಿಂದೂಗಳು ಹೊರಬೀಳುವುದಕ್ಕೆ, ಹಿಂದೂ ಸಂಸ್ಕೃತಿಗೆ ಕನ್ನಡಿಹಿಡಿಯುವಂಥಹ ಹಬ್ಬಗಳನ್ನು ವಿವರಿಸುತ್ತಾ ಬಂದಿದ್ದೇವೆ. ಹಿಂದೂಗಳಿಗೆ ಆಧ್ಯಾತ್ಮಿಕವೆಂಬ ಕನ್ನಡಿಯಲ್ಲಿ ಹಬ್ಬಗಳ ಅರ್ಥವನ್ನು ತೋರಿಸುತ್ತಾ ಬಂದಿದ್ದೇವೆ. ಸಾಮಾಜಿಕ ಅರಿವನ್ನು ಉಂಟುಮಾಡುವ ನಾಗಚವತಿಯಲ್ಲಿ ಸಹ ಭಕ್ತಿಯನ್ನು ಬೆಳೆಸಿಕೊಳ್ಳಿ ಎಂದು ಹೇಳಿದ್ದೇವೆ. ಅದೇ ದಾರಿಯಲ್ಲಿ ಸಾಮಾಜಿಕ ನ್ಯಾಯವನ್ನು, ನೀತಿಯನ್ನು ತೋರಿಸುವ ವಿನಾಯಕ ಚವತಿಯಲ್ಲಿಯೂ ಸಹ ಭಕ್ತಿಯನ್ನು ಬೆಳೆಸಿಕೊಳ್ಳಿಯೆಂದು ತಿಳಿಸುತ್ತಿದ್ದೇವೆ. ನಾಗಚವತಿ ಸಮಾಜಕ್ಕೆ ಆರೋಗ್ಯವನ್ನು ತಿಳಿಸುವ ಸೂತ್ರವನ್ನು ತಿಳಿಸುವಾಗ, ವಿನಾಯಕಚವತಿ ಸರಿಯಾದ ಸಮಾಜವನ್ನು ನೆಲೆಗೊಳಿಸುವ ಅಂಶವನ್ನು ತಿಳಿಸುವುದಾಗಿದೆ. ಸಮಾಜಕ್ಕೆ ದೊಡ್ಡ ಸಂದೇಶಕೊಡುವ ವಿನಾಯಕ ಚವತಿಯನ್ನು ಕುರಿತು ತಿಳಿದುಕೊಳ್ಳೋಣ.

ನಾವು ಪ್ರತಿ ವರ್ಷ ಆಗಷ್ಟು ಅಥವಾ ಸೆಪ್ಟೆಂಬರ್ ತಿಂಗಳಲ್ಲಿ ಬರುವ ವಿನಾಯಕನ ಹಬ್ಬವನ್ನು ಎಷ್ಟೋ ಉತ್ಸಾಹದಿಂದ ಮಾಡಿಕೊಳ್ಳುತ್ತೇವೆ. ಈದಿನ ಇಂದೂ (ಹಿಂದೂ) ಪ್ರಜೆಗಳಲ್ಲಿ ಎಷ್ಟೋ ಗಾಢವಾಗಿ ನೆಲೆಯೂರಿದ ಈ ಹಬ್ಬದ ಕುರಿತು ಬೇರೆ ಮತಸ್ಥರ ವಿಮರ್ಶೆಗಳು ಕೂಡ ಎಷ್ಟೋ ಇವೆ. ಅಂತಹ ವಿಮರ್ಶಕರು ನಮ್ಮ ಹತ್ತಿರಕ್ಕೆ ಬಂದು "ನೀವು ಎಷ್ಟೋ ಖಚಿತವಾಗಿ ಸತ್ಯವಾದ ವಿಷಯಗಳು ತಿಳಿಸುತ್ತಿದ್ದೀರಾ ಅಲ್ಲವೆ! ಅಂಥದರಲ್ಲಿ ನೀವು ನಮ್ಮ ಪ್ರಶ್ನೆಗಳಿಗೆ ಸಮಾಧಾನಕೊಡುತ್ತೀರಾ" ಎಂದು ಕೇಳಿದ್ದಾರೆ. ಅದಕ್ಕೆ ಸಮಾಧಾನವಾಗಿ ನಾವು ಆಧ್ಯಾತ್ಮಿಕದಲ್ಲಿ ಸತ್ಯವಾದ ಜ್ಞಾನವಿಷಯಗಳನ್ನೆ ತಿಳಿಸುತ್ತಾ ಜೀವನವನ್ನು ಸಾಗಿಸಬೇಕೆಂದುಕೊಂಡಿದ್ದೇವೆ. ಆದ್ದರಿಂದ ನಿಮ್ಮ ಪ್ರಶ್ನೆಗಳಿಗೆ ಉತ್ತರಗಳು ನನಗೆ ತಿಳಿದಿದ್ದರೆ ತಿಳಿಸುತ್ತೇನೆ, ಇಲ್ಲದಿದ್ದರೆ ನನಗೆ ತಿಳಿದಿಲ್ಲವೆಂದು ಹೇಳುತ್ತೇನೆ ಕೇಳಿರಿ ಎಂದು ಹೇಳಿದ್ದೇವೆ. ಆಗ ಅವರು ಕೇಳಿದ ಮಾತುಗಳು ಹೀಗಿವೆ.

1) ಇಂದೂಮತದಲ್ಲಿ ವಿಘ್ನೇಶ್ವರ ಹಬ್ಬವೆಂದು ಆಚರಣೆ ಮಾಡುತ್ತಿದ್ದಾರೆ ಅಲ್ಲವೆ! ವಿಘ್ನೇಶ್ವರನು ಅಂದರೆ ವಿಘ್ನಗಳಿಗೆ ಅಧಿಪತಿಯೆಂದು ಅಲ್ಲವೆ ಅರ್ಥ. ವಿಘ್ನಗಳೆಂದರೆ ಅಡ್ಡಿ ಆತಂಕಗಳು ಎಂದಲ್ಲವೆ ಅರ್ಥ, ಅಂತಹ ಅಡ್ಡಿ ಆತಂಕಗಳಿಗೆ ಅಧಿಪತಿಯಾಗಿ, ಆತಂಕಗಳನ್ನು ಉಂಟುಮಾಡುವವನನ್ನು ಶತ್ರುವಾಗಿ ಭಾವಿಸಿ ದೂಷಿಸಬೇಕು, ಆದರೆ ಪೂಜಿಸುವುದೇತಕ್ಕೆ? ಕೆಟ್ಟದ್ದು ಮಾಡುವವನು ಬಲವಾದವನಾದರೆ ಅವನನ್ನು ಯಾರೂ ವಿರೋಧಿಸದೆ ಹೊಗಳಿದಂತೆ, ನೀವು ಮಾಡುವ ಭಕ್ತಿ ಕೂಡಾ ವಿಘ್ನೇಶ್ವರನು ವಿಘ್ನಗಳನ್ನು ಉಂಟುಮಾಡುತ್ತಾನೆಂದು ಭಯಪಟ್ಟು, ಭಯದಿಂದ ಪೂಜೆ ಮಾಡುತ್ತಿರುವಂತಿದೆ. ಆದರೆ ಭಕ್ತಿಯಿಂದ ಅಲ್ಲವೆಂದು ತಿಳಿಯುತ್ತಿದೆ ಇದಕ್ಕೆ ನೀವೇನನ್ನುತ್ತೀರಾ?

2) ಎಷ್ಟೋ ಭಕ್ತಿಯಿಂದ, ಮತ್ತೆಷ್ಟೋ ಖರ್ಚಿನಿಂದ ಎಷ್ಟೋ ಸುಂದರವಾಗಿ ತಯಾರಿಸಿದ ವಿಘ್ನೇಶ್ವರನ ಪ್ರತಿಮೆಗಳನ್ನು ಬಹಳ ಭಕ್ತಿಯಿಂದ ಪೂಜಿಸಿಕೊಂಡು, ಮೊದಲು ದಿನ ತೋರಿಸಿದ ಭಕ್ತಿಯೆಲ್ಲವನ್ನು (ಕೆರೆಯಲ್ಲಿ)ನೀರಿನಲ್ಲಿ ಕಲಿಸಿ, ವಿಘ್ನೇಶ್ವರನನ್ನು ನೀರಿನೊಳಗೆ ಎಸೆಯುವುದು ಒಳ್ಳೆಯದಾ? ಇನ್ನೂ ಸಾಕು ನಿನ್ನ ಸಹವಾಸ ಎನ್ನುವಹಾಗೆ ವಿನಾಯಕನನ್ನು ನೀರಿನೊಳಗೆ ತಳ್ಳಿ ಕೈಗಳು ಕೊಡವಿಕೊಳ್ಳುವುದು ಭಕ್ತಿ ಎನ್ನುತ್ತೀರಾ?

3) ಹತ್ತುರೂಪಾಯಿಗಳು ಇಟ್ಟು ದೈವಜ್ಞಾನ ತಿಳಿಸುವ ಗ್ರಂಥವನ್ನು ಕೊಂಡುಕೊಳ್ಳುವುದಕ್ಕೆ ದುಃಖಪಡುವವರನ್ನು ನೀವೆಷ್ಟೋ ಜನರನ್ನು ನೋಡಿರುತ್ತೀರಾ. ಅಂತಹವರು ಸಹಿತ ಸಾವಿರಾರು ಖರ್ಚು ಇಟ್ಟು ವಿನಾಯಕ ಪ್ರತಿಮೆಗಳು ಮಾಡಿ ಅವುಗಳನ್ನು ಮುರಿದುಹಾಕಿ ಅವರ ಹಣವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಕೆಲವರು ಬಲವಂತವಾಗಿ ಪ್ರತಿಮೆಗಳ ಖರ್ಚಿಗೆಂದು ಇತರರಿಂದ ಹಣವನ್ನು ವಸೂಲು ಮಾಡುತ್ತಿದ್ದಾರೆ. ಹೀಗೆ ಬಲವಂತವಾಗಿ ವಸೂಲು ಮಾಡುವುದು ಬಲವಂತ ಭಕ್ತಿ ಅಲ್ಲವೆ?

4) ಒಂದೇ ರೀತಿಯಲ್ಲಿ, ಒಂದೇ ಪದ್ಧತಿಯಾಗಿ, ಒಂದೇ ವಿಧವಾಗಿ

ಅವಯವಗಳು ಹೊಂದಿ ಹುಟ್ಟಿದ ನಾವು, ಒಂದೇ ದೇವರ ಮಕ್ಕಳೆಂದು ಮರೆತು, ಮತದ್ವೇಷಗಳನ್ನು ಬೆಳೆಸಿಕೊಳ್ಳುವ ಕ್ರಮದಲ್ಲಿ ವಿನಾಯಕ ಹಬ್ಬವನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಜ್ಞಾನವನ್ನು ಹೊಂದಿದ ಯೋಗಿಗಳಾಗಿ ನೀವೇನನ್ನುತ್ತೀರಾ?

ಈ ವಿಧವಾಗಿ ಕೇಳಿದವರಿಗೆ ವಿನಾಯಕ ಚವತಿ(ಚತುರ್ಥಿ) ಹಬ್ಬದ ರಹಸ್ಯ ನಾವು ಹೇಳಬೇಕಾಗಿ ಬಂದಿದೆ. ಅವರ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಕೊಡದೆಹೋದರೆ, ಅವರ ಹೃದಯದಲ್ಲಿ ವಿನಾಯಕ ಹಬ್ಬದ ಮೇಲಿರುವ ಭಾವವನ್ನು ಮಾರ್ಪಡಿಸಲಾರೆವು. ನಮಗೆ ಇದು ದೊಡ್ಡ ವಿಷಯವಾಗಿದ್ದರೂ ಕೇಳುವವರಿಗೆ ಚಿಕ್ಕದಾಗಿಯೇ ಕಾಣಿಸುತ್ತದೆ. ಆದ್ದರಿಂದ ನಿಜಾರ್ಥವನ್ನು ಹೇಳುವುದು ತಪ್ಪುವುದಿಲ್ಲ ಆದ್ದರಿಂದ ಹೀಗೆ ಹೇಳಿದ್ದೇನೆ. ಪ್ರಪಂಚ ಹುಟ್ಟುವ ಸಮಯದಲ್ಲಿ ಮತಗಳು ಎಂಬುವವು ಇಲ್ಲ. ದೇವತೆಗಳೆಂಬುವವರು ಇಲ್ಲ, ದೇವರೊಬ್ಬನೆಂಬ ವಿಷಯ ಎಲ್ಲರಿಗೂ ತಿಳಿದಿದೆ. ಸ್ವಲ್ಪ ಕಾಲಕ್ಕೆ ಅಂಥಹ ಭಾವನೆ ಮನುಷ್ಯರಲ್ಲಿ ಕ್ಷೀಣಿಸುವುದು ಮೊದಲಾಗಿದೆ. ಆ ಸಮಯದಲ್ಲಿ ತತ್ತ್ವಜ್ಞರಾದ ಮಹಾತ್ಮರು ಕೆಲವರು ಯೋಚಿಸಿ, ಅಜ್ಞಾನ ಬೀಜವನ್ನು ತೆಗೆದುಹಾಕುವುದಕ್ಕೆ, ದೈವತ್ವವನ್ನು ಕುರಿತು ಪ್ರಚಾರ ಮಾಡಿದ್ದಾರೆ. ದೇವರಿಗೆ ರೂಪವಿಲ್ಲ, ಆದ್ದರಿಂದ ಮೂಗು ಮುಖವಿಲ್ಲದ ಕಲ್ಲನ್ನು(ಲಿಂಗವನ್ನು) ಗುರುತಾಗಿ ಇಟ್ಟು, ದೇವರು ಹೀಗಿರುತ್ತಾನೆಂದು ರೂಪವಿಲ್ಲದವನಾಗಿ ಬೋಧಿಸಿದ್ದಾರೆ. ದೇವರಿಗೆ ಹೆಸರು ಇಲ್ಲ, ಆದ್ದರಿಂದ ಈಶ್ವರನೆಂದು ಕರೆದಿದ್ದಾರೆ. ಈಶ್ವರನೆಂದರೆ ಅಧಿಪತಿ ಎಂದು ಅರ್ಥವೇ ಹೊರತು ಇದು ಹೆಸರಲ್ಲ. ಹೀಗೆ ಸರ್ವಕ್ಕೆ ಅಧಿಪತಿಯಾದವ ನೊಬ್ಬನಿದ್ದಾನೆಂದು ರೂಪವಿಲ್ಲದ ಗುಂಡನ್ನು ತೋರಿಸಿ, ತಿಳಿಯದಂತೆ ಹೋಗಿರುವ ದೈವತ್ವವನ್ನು ಕುರಿತು ಆಂದಿನ ಹಿರಿಯರು ತಿಳಿಸಿದ್ದಾರೆ.

ಹೀಗೆ ಜ್ಞಾನರೀತಿಯಲ್ಲದೆ, ಸಂಘರೀತಿಯಲ್ಲೂ ಸಹ ಎರಡು ವಿಧಗಳಲ್ಲಿ ಮಾನವನನ್ನು ನಡೆಸುವುದಕ್ಕೆ ಆದಿನದ ಹಿರಿಯರು ಕೃಷಿ ಮಾಡಿದ್ದಾರೆ. ಈದಿನ

ನಾವು **'ಸಾಮೆತ' (ಗಾದೆ)** ಎನ್ನುವ ಪದವನ್ನು ಆದಿನ **'ಸಮತ'** ಎನ್ನುತ್ತಿದ್ದರು. ಹಿರಿಯರ ಮಾತು ಬದಲಾಗದಿರುವುದೆಂದು, ಅವರ ಮಾತು ಸತ್ಯವೆಂದು ಅವರ ವಾಕ್ಯ ಕೆಡದ ವಾಕ್ಯವೆಂದು ಹೇಳುವುದಕ್ಕೆ ಸಮಾನವಾಗಿ **"ಹಿರಿಯರ ಮಾತು ಮೊಸರನ್ನದ ಬುತ್ತಿ"** ಎನ್ನುವ ಗಾದೆ ಇಂದಿಗೂ ಜನ ಮನ್ನಣೆ ಗಳಿಸಿದೆ. ಹಿರಿಯರ ಮಾತಿಗೆ ಸಮಾನವಾಗಿ ಮೊಸರನ್ನದ ಬುತ್ತಿಯನ್ನು ಬಳಸಿದ್ದಾರೆ. ಸಮತ ಎಂದರೆ ಸಮಾನವೆಂದು ಅರ್ಥ. ಹಾಗೆ **"ಚಿಂತೆ ಇಲ್ಲದವರಿಗೆ ಸಂತೆಯಲ್ಲಿ ನಿದ್ರೆ ಬಂತು"** ಎನ್ನುವುದು ಸಹ ಇದೆ. ಚಿಂತೆ ಇಲ್ಲದವರಿಗೆ ಸಂತೆಯಲ್ಲಿ ನಿದ್ರೆಗೆ ಸಮಾನವಾಗಿ (ಸಮತವಾಗಿ) ಹೋಲಿಸಿ ಹೇಳುವುದೆಂಬ ಮಾತು. ಇಂತಹ ಸಮತ ಎಂಬ ಪದ ಸ್ವಲ್ಪಕಾಲಕ್ಕೆ ಹೇಳುವುದರಲ್ಲಿ **'ಸಾಮತ'** ಯಾಗಿ ಮಾರ್ಪಟ್ಟಿದೆ. ಹಾಗೆ ಮತ್ತೆ ಸ್ವಲ್ಪಕಾಲಕ್ಕೆ ಸಾಮತ ಹೋಗಿ **'ಸಾಮೆತ'** ವಾಗಿ ಬದಲಾಗಿಹೋಗಿ ಇಂದು ನಮ್ಮ ಮುಂದಿದೆ. ಇಂತಹ ಎಷ್ಟೋ ಮುಖ್ಯವಾದ ಸಾಮೆತೆಗಳನ್ನು ಪೂರ್ವದಲ್ಲಿ ಮಾನವನನ್ನು ಸಮಾಜದಲ್ಲಿ ಸಕ್ರಮವಾಗಿ ನಡೆಸುವುದಕ್ಕೆ ಹಿರಿಯರಿಟ್ಟಿದ್ದಾರೆ. ಆ ವಿಧಾನದ ಪ್ರಕಾರವೇ ಸಮಾಜದಲ್ಲಿನ ಒಂದು ಕೆಡಕನ್ನು ತೆಗೆದುಹಾಕುವುದಕ್ಕೆ ಸಮಾನ ಹೋಲಿಕೆಯಿಂದ, ಸಮಾಜದಲ್ಲಿ ಬಲಹೀನನನ್ನು ಇಲಿಯಾಗಿ ಹೋಲಿಸಿ, ಬಲವಂತನನ್ನು ಆನೆಯಾಗಿ ಹೋಲಿಸಿ ಹೇಳುತ್ತಿದ್ದರು. ಬಲವಂತನು ಬಲಹೀನನ ಮೇಲೆ ದೌರ್ಜನ್ಯ ಚಲಾಯಿಸಿ ಪೀಡಿಸುವುದನ್ನು **"ಇಲಿ ಮೇಲೆ ಆನೆ ಸವಾರಿ ಮಾಡಿದಂತೆ"** ಎಂಬ ಸಾಮೆತೆ (ಗಾದೆ) ಯನ್ನು ಹೇಳುತ್ತಿದ್ದರು. ಇದು ಸಂಘವಿದ್ರೋಹ ವರ್ತನೆಯಾದ್ದರಿಂದ ಇದು ಒಳ್ಳೆಯದಲ್ಲವೆಂದು ಎಲ್ಲರಿಗೂ ತಿಳಿಯುವಂತೆ, ಬಾಯಿಂದ ಹೇಳುವುದಲ್ಲದೆ ದೃಶ್ಯರೂಪವಾಗಿ ಕಣ್ಣಿಗೆ ಕಾಣಿಸುವ ಕಾರ್ಯಕ್ರಮವಾಗಿ ತೋರಿಸುತ್ತಿದ್ದರು. ಒಂದು ಚಿಕ್ಕ ಇಲಿಯನ್ನು ಇಟ್ಟು, ಅದರಮೇಲೆ ದೊಡ್ಡ ಆನೆಯನ್ನು ಆಸೀನವಾದಂತೆ ಮಾಡಿ, ಅದು ಎಲ್ಲರಿಗೂ ತಿಳಿಯುವಹಾಗೆ ಊರೆಲ್ಲಾ ಮೆರವಣಿಗೆಮಾಡಿ, ಕೊನೆಗೆ ಈ ಪದ್ಧತಿ ಒಳ್ಳೆಯದಲ್ಲವೆನ್ನುವಂತೆ ಆ ದೃಶ್ಯವನ್ನು ನಾಶ ಮಾಡುತ್ತಿದ್ದರು. ಅವರು ಆ ದಿನ ಮಣ್ಣಿನಿಂದ ಮಾಡಿದ ಬೊಂಬೆಗಳನ್ನು

ಅಗ್ನಿಯಲ್ಲಿ ಹಾಕಿ ಸುಟ್ಟರೆ ಇನ್ನೂ ಗಟ್ಟಿಯಾಗಿ ಅಚ್ಚಳಿಯದಂತೆ ಇರುತ್ತವೆಂದು, ನೀರಿನಲ್ಲಾದರೆ ಪೂರ್ತಿಯಾಗಿ ಕರಗಿಹೋಗುತ್ತವೆಂದು ನೀರಿನಲ್ಲಿ ಮುಳುಗಿಸುತ್ತಿದ್ದರು. ನೀರಿನೊಳಗೆ ಹಾಕಿದ ನಂತರ ಆ ದೃಶ್ಯ ಬೇಗನೆ ನಾಶವಾಗುವುದಕ್ಕೆ ನೀರಿನೊಳಗೆ ಹಾಕದ ಮುನ್ನವೇ ಆ ಬೊಂಬೆಗೆ ಕಾಲು, ಕೈಗಳು ಮುರಿದುಹಾಕಿ ಪೂರ್ತಿ ನೀರಿನಲ್ಲಿ ಬೆರೆತುಹೋಗುವಂತೆ ಮಾಡುತ್ತಿದ್ದರು. ಇದು ಅಂದಿನ ಸಂಘ ಸಂಸ್ಕರಣೆಗೋಸ್ಕರ ಮಾಡಿದ ಆಚರಣೆ. ಈ ಕಾರ್ಯ ಪ್ರತಿ ವರ್ಷ ಒಂದು ಆಚರಣೆಯಾಗಿ ಮಾಡುವುದು ಇಂದಿಗೂ ಉಳಿದಿದೆ. ಆದರೆ ಅರ್ಥ ಮಾತ್ರ ತಿಳಿಯದಹಾಗೆ ಹೋಗಿದೆ. ಒಬ್ಬರು ಆಚರಣೆ ಮಾಡುತ್ತಿರುವುದನ್ನು ನೋಡಿ ಇನ್ನೊಬ್ಬರು ಆ ಆಚರಣೆಯನ್ನೆ ಮುಂದು ವರಿಸುವುದೆ ಈದಿನ ನಮಗೆ ತಿಳಿದ ಆಚರಣಾ ವಿಧಾನವಾಗಲಿ, ಆ ಆಚರಣೆಯ ಭಾವಾರ್ಥವನ್ನು ಕುರಿತು ಯಾರೂ ಆಲೋಚಿಸುತ್ತಿಲ್ಲ. ಯಾವುದೆ ಮತಸ್ಥರು ಮಾಡುತ್ತಿರುವ ಆಚರಣೆ ಪೂರ್ವದಲ್ಲಿ ತಮ್ಮ ಹಿರಿಯರು ದೊಡ್ಡ ಭಾವಾರ್ಥ ದಿಂದ ಇಟ್ಟಿರುವುದೆಂದು ಆ ಮತಸ್ಥರಿಗೆ ತಿಳಿಯದಿರುವಾಗ, ಬೇರೆ ಮತಸ್ಥರು ಅಪಾರ್ಥ ಮಾಡಿಕೊಳ್ಳುವುದರಲ್ಲಿ ತಪ್ಪಿಲ್ಲ. ಆದರೆ ನಿಜವಾದ ಅರ್ಥವನ್ನು, ಆಚರಣೆಯನ್ನು ತೆಗೆದುಕೊಂಡಾಗ ಅದರಲ್ಲಿ ವಿಮರ್ಶಿಸುವುದು ಏನೂ ಇರುವುದಿಲ್ಲ. ಯಾರೂ ವಿಮರ್ಶಿಸಲಾರರು, ಅಸಲಾದ ಅರ್ಥ ತಿಳಿದಾಗ ಎಲ್ಲಾ ಮತಸ್ಥರ ಬೆಂಬಲ ಲಭಿಸುತ್ತದೆ.

ನಾವು ಮೊದಲೆ ಹೇಳಿದ್ದೇವಲ್ಲ! ಪೂರ್ವದಲ್ಲಿ ಮತವೆಂಬ ಹೆಸರು ಇಲ್ಲದ ಪ್ರಜೆಗಳಿಗೆ ದೇವರೊಬ್ಬನೆ ಎಂಬ ಭಾವನೆ ಇತ್ತೆಂದು, ದೇವರಿಗೆ ರೂಪ, ಹೆಸರು ಇಲ್ಲವೆಂಬ ಗುರುತಿಗಾಗಿಯೇ ಕಲ್ಲಿನ ಲಿಂಗವನ್ನು ಇಟ್ಟಿದ್ದಾರೆಂದು, ಆದರೂ ಸಹ ಕಾಲಕ್ರಮವಾಗಿ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂಬ ಗೀತಾವಾಕ್ಯಾನುಸಾರ, ಸ್ವಲ್ಪ ಕಾಲಕ್ಕೆ ಮಾನವರಲ್ಲಿ ಅಜ್ಞಾನವಶದಿಂದ ಏಕತ್ವ ಹೋಗಿ, ನಾವು ನೀವು ಎಂಬ ಗುಂಪುಗಳಾಗಿ ಒಡೆದು ಹೋದವರಿಗೂ ಸಹ ಹೆಸರುಗಳಿರುತ್ತಿದ್ದವು. ಹೀಗೆ ಸ್ವಲ್ಪ ಕಾಲಕ್ಕೆ ಬೇರ್ಪಟ್ಟ ಗುಂಪುಗಳೆ ವೈಷ್ಣರು,

ಶೈವರು. ಪೂರ್ವದಲ್ಲಿ ವೈಷ್ಣರು, ಶೈವರು ಸಂಪ್ರದಾಯಗಳನ್ನು ಏರ್ಪಡಿಸಿಕೊಂಡು, ಇವು ನಮ್ಮ ಸಂಪ್ರದಾಯಗಳೆನ್ನುತ್ತಾ, ಅವುಗಳ ಭದ್ರತೆಗೋಸ್ಕರ ಕೆಲವು ಪುರಾಣಗಳನ್ನು ಬರೆದು, ಅವು ಪ್ರಜೆಗಳಿಗೆಲ್ಲ ತಿಳಿಯುವಂತೆ ಮಾಡಿ, ಅವರ ಸಂಪ್ರದಾಯಗಳನ್ನು ಭದ್ರ ಪಡಿಸಿಕೊಂಡಿದ್ದಾರೆ. ಅಂತಹ ಪುರಾಣಗಳಲ್ಲಿ ಶೈವರ ಸಂಬಂಧವಾದ "ಶಿವಪುರಾಣ" ಹುಟ್ಟಿದೆ.

**ಹೀಗೆ ಶೈವರು ಏರ್ಪಟ್ಟ ಎರಡು ಸಾವಿರ ವರ್ಷಗಳಿಗೆ ಮೊದಲೆ ಸಮಾಜದಲ್ಲಿ ಕೆಟ್ಟತನವನ್ನು ಆನೆಯಾಗಿ, ಇಲಿಯಾಗಿ ತೋರಿಸಿ ನೀರಿನಲ್ಲಿ ಮುಳುಗಿಸುವ ಆಚರಣೆ ಇದೆ.** ಆ ಆಚರಣೆ ಮಾಡುತ್ತಾ ಮಾಡುತ್ತಾ ಹಿರಿಯರು ಮರಣಿಸುತ್ತಾ ಬಂದು, ಚಿಕ್ಕವರು ಅವರನ್ನನುಸರಿಸುತ್ತಾ ಮಾಡುತ್ತಾ, ಕೊನೆಗೆ ಏಕೆ ಈ ಆಚರಣೆ ಮಾಡುತ್ತಿದ್ದೇವೆಂಬುದು ಯಾರಿಗೂ ತಿಳಿಯದಹಾಗೆ ಹೋಗಿದೆ. ಅರ್ಥವೇನೆಂದು ತಿಳಿಯದೆ ಎಷ್ಟೋ ಜನ ಬೆರೆತು ಆನಂದವಾಗಿ ಇಲಿಯನ್ನು ಆನೆಯನ್ನು ಮೆರವಣಿಗೆ ಮಾಡುತ್ತಿದ್ದೇವೆ. ಇದೊಂದು ದೊಡ್ಡ ಭಕ್ತಿ ಕಾರ್ಯಕ್ರಮವೆಂದುಕೊಂಡು ಆ ಆನೆ ಆಕಾರಕ್ಕೆ ನಮಸ್ಕರಿಸುವುದನ್ನು ಪ್ರಾರಂಭ ಮಾಡಿದ್ದಾರೆ. ಹಾಗೆ ಶೈವರುದ್ಭವಿಸುವ ದಿನಗಳಿಗೆ ಇಲಿ ಆನೆ ಬೊಂಬೆಗಳನ್ನು ನಮಸ್ಕರಿಸುವವರು ಇದ್ದಾರೆ ಆದ್ದರಿಂದ ಶೈವರು ಶಿವಪುರಾಣದಲ್ಲಿ ಇಲಿಗೂ ಆನೆಗೂ ವಿಶಿಷ್ಟತೆ ಕಲ್ಪಿಸಿ, ಆನೆ ತಲೆಹೊಂದಿದವನು ವಿನಾಯಕನೆಂದು, ಆತನೆ ಪಾರ್ವತಿ ಕುಮಾರನೆಂದು ಇರುವ ಭಕ್ತಿಯನ್ನು ಇನ್ನು ಸ್ವಲ್ಪ ಹೆಚ್ಚಾಗುವಂತೆ ಒಳ್ಳೆಯ ಕೆಲಸವೆ ಮಾಡಿದ್ದಾರೆ. ಆ ದಿನದಿಂದ ಆನೆಗೊಂಬೆ ಹೋಗಿ ಆನೆ ತಲೆಮಾತ್ರ ಇರುವ ವಿನಾಯಕನ ಬೊಂಬೆಬಂದಿದೆ. ಇರುವ ಭಕ್ತಿಯನ್ನು ಹೆಚ್ಚು ಮಾಡುವುದರಿಂದ ವಿನಾಯಕನ ಬೊಂಬೆಗಳು ಮಾಡುವವರು ಹೆಚ್ಚಾಗಿದ್ದಾರೆ. ಹಣ ಖರ್ಚುಹಿಟ್ಟು ಪೂಜಿಸುವವರು ಹೆಚ್ಚಾಗಿದ್ದಾರೆ, ಆದರೆ ನೀರಿನಲ್ಲಿ ಹಾಕಿ ತುಳಿಯುವ ಪೂರ್ವದ ಆಚರಣೆಯನ್ನು ಬಿಡಿಸಲಾರದೆ ಹೋಗಿದ್ದಾರೆ. ಈ ವಿಧಾನವನ್ನು ಹೋಗಲಾಡಿಸದ ಹಿರಿಯರು ವಿನಾಯಕ ಮಜ್ಜನವನ್ನು ನೀರಿನಲ್ಲಿ ಮಾಡುತ್ತಿದ್ದೇವೆಂದಿದ್ದಾರೆ. ಮಜ್ಜನವೆಂದರೆ

ಸ್ನಾನವೆಂದು ಅರ್ಥವಾಗಲಿ ಮುರಿದುಹಾಕುವುದು, ಪೂಜಿಸಿದ ದೇವರನ್ನು ಕಾಲಲ್ಲೊದೆಯುವುದು ಸರಿಯಲ್ಲವೆಂದು ತಿಳಿಯಬೇಕು. ನೀವು ಕೇಳಿದ ಮೊದಲ ಪ್ರಶ್ನೆಯಲ್ಲಿ ವಿಘ್ನವನ್ನು ಕಲಿಗಿಸುವ ವಿಘ್ನೇಶ್ವರನನ್ನು ದೂಷಿಸುವುದಕ್ಕೆ ಆತನು ನಮಗೆ ವಿಘ್ನವಾಗಲಿ, ಯಾವ ಕೆಟ್ಟದಾಗಲಿ ಮಾಡಲಿಲ್ಲ ಅಲ್ಲವೆ! ಆದ್ದರಿಂದ ಆತನನ್ನು ದೂಷಿಸಬೇಕಾದ ಕೆಲಸವಿಲ್ಲ. ಭಕ್ತಿಹೊಂದಿ ವಿಘ್ನೇಶ್ವರನನ್ನು ಪೂಜಿಸುವುದರಲ್ಲಿ ತಪ್ಪಿಲ್ಲ, ಆದರೆ ಪೂಜಿಸಿದವನನ್ನು ಪೂಜಿಸಿದಂತೆ ಇಟ್ಟುಕೊಂಡಿದ್ದರೆ ಚೆನ್ನಾಗಿರುತ್ತಿತ್ತು, ನೀರಿನಲ್ಲಿ ಬೀಸಾಕುವುದು ಒಳ್ಳೆಯದಲ್ಲ. ಒಂದುಮಾತು ಹೇಳಬೇಕೆಂದರೆ ಅದನ್ನು ದೂಷಿಸುವುದಕ್ಕೆ, ಪೂಜಿಸುವುದಕ್ಕೆ ಅಲ್ಲದೆ ಸಮಾಜದಲ್ಲಿರುವ ಅನ್ಯಾಯವನ್ನು ಬಹಿರಂಗ ಮಾಡುವುದಕ್ಕೆ ಊರೇಗಿಸುವ ಮೆರವಣಿಗೆಯೆಂದು, ಹಾಗೆ ಅದನ್ನು ಇಲ್ಲದಹಾಗೆ ಮಾಡಬೇಕೆಂಬ ಉದ್ದೇಶವೆ ಆ ಬೊಂಬೆಯನ್ನು ನೀರಿನಲ್ಲಿ ಮುಳುಗಿಸಿ ನಾಶ ಮಾಡುವುದೆಂದು ಎಲ್ಲರೂ ತಿಳಿಯಬೇಕು.

ನೀವು ಕೇಳಿದ ಮತ್ತೊಂದು ಪ್ರಶ್ನೆ ಪ್ರಕಾರ ಬಲವಂತವಾಗಿ ಹಣ ವಸೂಲು ಮಾಡಿ ಉತ್ಸವ ಮಾಡುವುದು ಸೂಕ್ತ ಪದ್ಧತಿಯಲ್ಲ. ಭಕ್ತಿಯಲ್ಲಿ ಸಹ ಅದು ಬಲವಂತದ ಭಕ್ತಿ ಆಗುತ್ತದೆ, ಅದು ಮನಸ್ಫೂರ್ತಿ ಭಕ್ತಿಯಲ್ಲ. ಇಷ್ಟವಿಲ್ಲದಿದ್ದರೂ ಕೊಟ್ಟವರು ಕೇಳಿದವರನ್ನೆ ಅಲ್ಲದೆ, ವಿಘ್ನೇಶ್ವರನನ್ನು ಸಹ ನಿಂದಿಸುವುದಕ್ಕೆ ಅವಕಾಶ ಇದೆ. ಆದ್ದರಿಂದ ಇನ್ನೊಬ್ಬರ ಹತ್ತಿರ ಹಣ ವಸೂಲು ಮಾಡುವುದು ಒಳ್ಳೆಯ ಪದ್ಧತಿಯಲ್ಲ.

ಪೂರ್ವಕಾಲದಲ್ಲಿ ಸಮತ ಎಂಬ ಪದ ಸಾಮತೆಯಾಗಿ ಬದಲಾಗಿ ಕೊನೆಗೆ ಸಾಮೆತೆಯಾಗಿ ಬದಲಾದಂತೆ, ಆ ದಿನ ಹಿರಿಯರು ಇಟ್ಟಿರುವ ಸಂಘಸಂಸ್ಕರಣ ಪದ್ಧತಿಯಾದ **ಇಲಿ ಆನೆ ಮೆರವಣಿಗೆ** ಇಂದು ಭಕ್ತಿರೂಪವಾಗಿ ಬದಲಾಗಿಹೋಗಿದೆ. ಪುರಾಣಗಳ ಪ್ರಭಾವದಿಂದ ಆನೆ ರೂಪ ಸ್ವಲ್ಪ ವಿನಾಯಕನ ರೂಪವಾಗಿ ಬದಲಾದಲ್ಲಿಯೂ ಆಚರಣೆ ಪೂರ್ತಿ ಬದಲಾಗದೆ ಪೂರ್ವಾ ಚರಣೆಯನ್ನೆ ವಾಾಡುವುದರಿಂದ ಇತರ ಮತಸ್ಥರಾದ ಕೆಲವರಿಂದ

ವಿಮರ್ಶಿಸಲ್ಪಡುತ್ತಿದೆ. ಆಚರಣೆಯನ್ನು ಪೂರ್ತಿ ಭಕ್ತಿಭಾವವಾಗಿ ಮಾರ್ಪಡಿಸಿಕೊಂಡರೂ ಪರವಾಗಿಲ್ಲ, ಇಲ್ಲವೆ ಮೊದಲಿನಂತೆ ಸಂಘರೀತಿ ಇಟ್ಟುಕೊಂಡರು ಪರವಾಗಿಲ್ಲ. ಆದರೆ ಆಕಡೆ ಈಕಡೆ ಅಲ್ಲದೆ ಮಾಡುತ್ತಿರುವ ಕೆಲಸಕ್ಕೆ ಅರ್ಥ ತಿಳಿಯದೆಹೋಗಿರುವುದರಿಂದ ಇತರ ಮತಗಳಿಂದ, ನೋಡುವವರಿಂದ ವಿಮರ್ಶಿಸಲ್ಪಡುವ ಕಾರ್ಯವಾಗಿದೆ. ವಿನಾಯಕನ ಮಜ್ಜನ (ಸ್ನಾನ) ಎಂಬ ಹೆಸರಿನಿಂದ ಚಿಕ್ಕ ಚಿಕ್ಕ ಬೊಂಬೆಗಳನ್ನು ನೀರಿನೊಳಗೆ ಬೀಸುತ್ತಿರುವುದು ನೋಡಿದರೆ, ನಿಜವಾಗಲು ಭಕ್ತಿ ಎನಿಸುವುದಿಲ್ಲ. ಸಲಿಗೆಗೆ ಮಾಡುತ್ತಿರುವ ಕೆಲಸವಾಗಿ ಕಾಣಿಸುತ್ತದೆ, ಆದರೆ ಪೂರ್ತಿ ಭಕ್ತಿಯಿಂದ ಕಾಣಿಸುವ ಕೆಲಸವಾಗಿ ಗೋಚರಿಸುತ್ತಿಲ್ಲ. ಮೆರವಣಿಗೆ ಅನ್ನೋಣವಾ? ಕೆಲವು ಕಡೆ ಬಾಬಯ್ಯ (ಪೀರ್ಲ) ಹಬ್ಬದಂತೆ ಕುಡಿದು ಕುಪ್ಪಳಿಸುವುದು, ಶೀಳ್ಳೆ ಹಾಕುವುದು, (ಕರ್ರಸಾಮುಲು) ಮಾಡುತ್ತಾ ಹೋಗುವುದು ನೋಡಿದರೆ ಸಲಿಗೆಯ ಸಂಪ್ರದಾಯವೇಯಾಗಲಿ, ಅರ್ಥಸಂಪ್ರದಾಯ ಅಲ್ಲವೆನಿಸುತ್ತದೆ. ಆದಿನ ನಮ್ಮ ಹಿರಿಯರು ಸಮಾಜದಲ್ಲಿನ ಕೆಟ್ಟತನವನ್ನು ತೆಗೆದುಹಾಕಿ ಸಮಾನತೆಯ ಸಮಾಜವನ್ನು ಸ್ಥಾಪಿಸುವುದಕ್ಕೆ ಆಚರಣೆ ಮಾಡಿ ತೋರಿಸಿರುವುದನ್ನು ಅರ್ಥ ಮಾಡಿಕೊಳ್ಳದೆ, ಅವರ ಅರ್ಥವನ್ನು ಹಾಳುಮಾಡಿ, ನಮ್ಮ ಇಷ್ಟಬಂದಂತೆ ನಾವು ವಿನಾಯಕ ಚವತಿಯನ್ನು ಮಾಡಿಕೊಳ್ಳುತ್ತಿದ್ದೇವೆ. ಈಕಡೆ ವಿದ್ಯಾವಂತರು, ಆಕಡೆ ಅವಿದ್ಯಾವಂತರು ಮೂಢವಾಗಿ ಹಿರಿಯರ ಉದ್ದೇಶವನ್ನು ಮಣ್ಣು ಪಾಲು ಮಾಡಿ ಅರ್ಥರಹಿತವಾದ ವಿನಾಯಕ ಚವತಿಯನ್ನು ಆಚರಣೆ ಮಾಡುತ್ತಿದ್ದಾರೆ.

ಇಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾಗಿರುವುದು ಏನೆಂದರೆ! ಕೃಷ್ಣನು ಭಗವಂತನಾದರೂ, ದೇವರ ಅಂಶವೇ ಕೃಷ್ಣನಾಗಿ ಭೂಮಿಮೇಲಕ್ಕೆ ಬಂದು ನಮ್ಮ ಜೀವನದ ಸಾರಾಂಶವಾದ ಭಗವದ್ಗೀತೆಯನ್ನು ಹೇಳಿದ, ಭಗವಂತನಾಗಲಿ, ಭಗವದ್ಗೀತೆಯಾಗಲಿ ಈಗಿನ ಜನರಿಗೆ ಪ್ರಾಮುಖ್ಯವಾಗಿ ಕಾಣಿಸದೆ, ಭಗವಂತನ ಹುಟ್ಟಿದ ಹಬ್ಬವಾದ ಕೃಷ್ಣಾಷ್ಟಮಿಯನ್ನೂ ಮಾಡದೆ, ಅದರ ಸ್ಥಾನದೊಳಗೆ ವಿನಾಯಕ ಚವಿತಿಯನ್ನು ತಂದಿಟ್ಟುಕೊಂಡಿದ್ದಾರೆ. ಕೃಷ್ಣಾಷ್ಟಮಿ ಹನ್ನೊಂದು

ದಿನಗಳ ಹಬ್ಬವೆಂದು ಈಗಾಗಲೆ ಹೇಳಿಕೊಂಡಿದ್ದೇವೆ. ಅಷ್ಟೇ ಅಲ್ಲದೆ ಕಲಿಯುಗ ಪ್ರಾರಂಭದಲ್ಲಿ ಬಹು ವಿಜೃಂಬಣೆಯಿಂದ ಮಾಡುವ ಬೀದಿ ಹಬ್ಬ ಕೃಷ್ಣಾಷ್ಟಮಿ ಒಂದೇಯೆಂದು ಸಹ ಹೇಳಿದ್ದೇವೆ. ಮಾಯಾ ಪ್ರಭಾವದಿಂದ ಒಂದುದಿನ ಮಾಡುವ ವಿನಾಯಕ ಚವತಿ ಹನ್ನೊಂದು ದಿನಗಳಾಗಿದೆ. ಹನ್ನೊಂದು ದಿನಗಳು ಮಾಡುವ ಕೃಷ್ಣಾಷ್ಟಮಿ ಒಂದುದಿನಕ್ಕೆ ನೇಮಿತವಾಗಿಹೋಗಿದೆ. ಅಷ್ಟೇ ಅಲ್ಲದೆ ಪೂರ್ವದಲ್ಲಿ ಕೃಷ್ಣಾಷ್ಟಮಿ ಹಬ್ಬ ಮುಕ್ತಾಯದ ದಿನ ಭಾದ್ರಪದಮಾಸ ಶುಕ್ಲಪಕ್ಷ ಚವತಿದಿನ ಆಗುತ್ತದೆ. ಸರಿಯಾಗಿ ಆ ದಿನವನ್ನೆ ವಿನಾಯಕ ಚವತಿಯಾಗಿ ಲೆಕ್ಕಿಸುವುದರಿಂದ, ಕೃಷ್ಣಾಷ್ಟಮಿ ಮುಕ್ತಾಯ ಹನ್ನೊಂದನೆ ದಿನಕ್ಕೆ ಅಡ್ಡಿ ಉಂಟಾಗಿದೆ. ಈ ವಿಧವಾಗಿ ಕೃಷ್ಣಾಷ್ಟಮಿಗೆ ಆತಂಕವಾಗಿ ವಿನಾಯಕಚವತಿ ಬರುವುದರಿಂದ ಹಿಂದೂ (ಇಂದೂ) ಸಂಸ್ಕೃತಿಯಲ್ಲಿನ ಮುಖ್ಯವಾದ ಕೃಷ್ಣಾಷ್ಟಮಿ ಹೋಗಿ, ಮುಖ್ಯವಲ್ಲದ ವಿನಾಯಕಚವತಿ ಬಂದು ನೆಲೆಯೂರಿದೆ. ಕೃಷ್ಣಾಷ್ಟಮಿ ಮುಕ್ತಾಯ ದಿನವಾದ ಹನ್ನೊಂದನೆಯ ದಿನವೇ ವಿನಾಯಕಚವತಿಯನ್ನು ಪ್ರಾರಂಭವಾಗುವುದರಿಂದ, ಕೆಲವರು ವಿನಾಯಕಚವತಿಯನ್ನು ಬಿಡಲಾರದೆ ಕೃಷ್ಣಾಷ್ಟಮಿಯನ್ನು ಒಂದುದಿನದ ಹಬ್ಬವಾಗಿ ಸರಿಮಾಡಿ, ಶ್ರಾವಣ ಬಹುಳ ಅಷ್ಟಮಿ ದಿನ ಮಾತ್ರ ಕೃಷ್ಣಾಷ್ಟಮಿಯನ್ನು ಮಾಡುವುದಕ್ಕೆ ಪ್ರಾರಂಭಮಾಡಿದ್ದಾರೆ. ಹಾಗೆ ಮಾಡುವುದರಿಂದ ನಾವು ನಮ್ಮ ಮುಖ್ಯವಾದ ಸಂಪ್ರದಾಯ ತಿಳಿಯದೆ ಹೋದಂತಾಗಿದೆ. ಆ ವಿಧವಾಗಿ ವರ್ಷದಲ್ಲಿ ಒಂದುದಿನ ಹಬ್ಬವಾಗಿ ಕೃಷ್ಣಾಷ್ಟಮಿ ಮಾರ್ಪಟ್ಟು ಸ್ವಲ್ಪಕಾಲ ಕಳೆದನಂತರ, ಕಾಲಕ್ರಮದಲ್ಲಿ ಆ ಒಂದುದಿನದ ಹಬ್ಬವನ್ನು ಸಹ ಮರೆತುಹೋಗಿ, ಕೃಷ್ಣಾಷ್ಟಮಿ ಅಂದರೆ ಏನೊ ತಿಳಿಯದಸ್ಥಿತಿಗೆ ನಾವು ಬಂದಿದ್ದೇವೆ. ಇನ್ನೂ ವಿಶೇಷವೇನೆಂದರೆ ಕೆಲವು ಪ್ರಾಂತಗಳಲ್ಲಿ ಕೃಷ್ಣನು ಬೆಳೆದ ಕುಲವಾದ ಯಾದವರಿಗೆ (ಗೊಲ್ಲರಿಗೂ) ಸಹ ಕೃಷ್ಣಾಷ್ಟಮಿಯ ಬಗ್ಗೆ ತಿಳಿಯದಂತೆ ಹೋಗಿದೆ. ಸಾಕ್ಷಾತ್ತು ದೇವರು ಅವತರಿಸಿ ಭಗವಂತನಾಗಿ ಬಂದ ಮೊದಲ ದಿನವಾದ ಕೃಷ್ಣಾಷ್ಟಮಿಗೆ ಇಂದು ಮಾನ್ಯತೆಯಾಗಲಿ, ಅರ್ಥವಾಗಲಿ, ಸರಿಯಾದ ಆಚರಣೆಯಾಗಲಿ ಇಲ್ಲದೆ ಹೋಗಿದೆ. ದೈವಕಾರ್ಯ ಒಂದು ಸಮಾಜ ಶ್ರೇಯಸ್ಸಿನ ವಿಷಯವಾಗಿದ್ದು, ಮಾಯಬಲದಿಂದ ದೈವಸ್ಥಾನವನ್ನು ಆಕ್ರಮಿಸಿ ಎಲ್ಲರಿಂದ

ಮಾನ್ಯತೆ ಪಡೆಯುತ್ತಾ, ಎಲ್ಲರಿಂದ ಆಚರಿಸಲ್ಪಡುತ್ತಿದೆ. ಈ ವಿಧವಾಗಿ ಸಮಾಜದಲ್ಲಿ ವಿನಾಯಕಚವತಿ ಬೀದಿಹಬ್ಬವಾಗಿ ಬದಲಾಗಿಹೋಗಿರುವುದು, ಅಷ್ಟೇ ಅಲ್ಲದೆ ಹನ್ನೊಂದು ದಿನಗಳ ಹಬ್ಬವಾಗಿ ಬದಲಾಗಿಹೋಗಿರುವುದು, ಕೃಷ್ಣಾಷ್ಟಮಿಗೆ ಎಲ್ಲಾ ವಿಧಗಳಿಂದ ಮಾನ್ಯತೆ ಇಲ್ಲದಿರುವುದು ನಮಗೆಲ್ಲ ಬಹಳ ದುಃಖ ವನ್ನುಂಟುಮಾಡಿದ ವಿಷಯ. ನನಗೆ ಅಲ್ಲ ಪ್ರತಿ ಹಿಂದೂವು (ಇಂದೂ) ದುಃಖಪಡಬೇಕಾದ ವಿಷಯ, ಪ್ರತಿಯೊಬ್ಬರು ಹಿಂದಿರುಗಿ ನೋಡಿಕೊಳ್ಳಬೇಕಾದ ವಿಷಯ.

ಇಂದೂ (ಹಿಂದೂ) ಧರ್ಮಗಳಿಗೆ ಪೂರ್ವದವೈಭವ ಬರಬೇಕೆಂದರೆ, ಇಂದೂತ್ವವು ಎಲ್ಲರಿಂದ ಆಚರಣೆಯೋಗ್ಯವಾಗಬೇಕೆಂದರೆ, ಈದಿನದ ಅಪಾರ್ಥ ಆಚಾರಗಳನ್ನು ಬಿಟ್ಟು, ಆದಿನದ ಭಾವಾರ್ಥ ಆಚಾರಗಳನ್ನು ಜಾರಿಗೊಳಿಸಬೇಕು. ಇಷ್ಟು ಹೇಳಿದರೂ ಕೆಲವರು ಮೊಂಡಾಗಿ ವಾದಿಸುತ್ತಾ, ವಿನಾಯಕಚವತಿ ಸಹ ಹಿಂದೂ ಧರ್ಮಗಳಿಗೆ ಸಂಬಂಧಿಸಿರುವುದಲ್ಲವೆ! ವಿನಾಯಕ ಪಾರ್ವತಿದೇವಿಗೂ, ಶಿವನಿಗೂ ಹುಟ್ಟಿದವನಲ್ಲವೆ ಎಂದು ಕೇಳಬಹುದು. ನಾನು ಪ್ರಾರಂಭದಿಂದ ನಮಗೆ ಶಾಸ್ತ್ರವೆ ಆಧಾರವೆಂದು ಹೇಳುತ್ತಲೇ ಇದ್ದೇನೆ. ಪಾರ್ವತಿ, ವಿನಾಯಕನು ಭಗವದ್ಗೀತೆಗಿಂತ ಮೊದಲು ವ್ಯಾಸನಿಂದ ಬರೆಯಲ್ಪಟ್ಟ ಒಂದು ಪುರಾಣಕಥೆಯಿಂದ ಬಂದವರು. ವಿನಾಯಕನ ಹುಟ್ಟುವಿಕೆಯೆ ಅಶಾಸ್ತ್ರೀಯ, ಪ್ರಕೃತಿಗೆ ವಿರುದ್ಧವಾಗುತ್ತದೆ. ತಂದೆಗೆ ತಿಳಿಯದಂತೆ ಮಗ ಹುಟ್ಟುವುದೇನೆಂದು ಯಾರಾದರೂ ಪ್ರಶ್ನಿಸಿದರೂ, ತಂದೆ ಸಂಬಂಧ ಇಲ್ಲದೆ ತಾಯಿ ಮಗನನ್ನು ಹೇಗೆ ಹುಟ್ಟಿಸಿಕೊಂಡಿದೆಂದು ಯಾರಾದರೂ ಕೇಳಿದರೂ, ನಾವು ಸರಿಯಾದ ಶಾಸ್ತ್ರಬದ್ಧವಾದ ಸಮಾಧಾನ ಹೇಳಲಾರೆವು. ಹಾಗೆ ಹುಟ್ಟಿದವನು ತಾಯಿ ಮಗನೆ ಆಗುತ್ತಾನೆ, ಆದರೆ ತಂದೆಯ ಮಗ ಅಲ್ಲ. ತಲೆ, ಮುಂಡಗಳು ಬೇರೆಬೇರೆಯಾಗಿ ಇದ್ದರೂ ನರಸಿಂಹಸ್ವಾಮಿ, ವಿನಾಯಕನ ಕಥೆಗಳು ಪುರಾಣಗಳೆ ಆಗುತ್ತವೆ. ಆದರೆ ಶಾಸ್ತ್ರಬದ್ಧವಾದ ಚರಿತ್ರೆಗಳು ಅಲ್ಲ. ಕವಿಗಳು ಸೃಷ್ಟಿಸಿದ ಕಥೆಗಳನ್ನು ಬಿಟ್ಟು ವಾಸ್ತವ ಚರಿತ್ರೆ ಇರುವ ವಿಷಯಗಳನ್ನೆ ಸ್ವೀಕರಿಸಬೇಕು.

ನಾಗಚವತಿಗೆ ಶಾಸ್ತ್ರೀಯತೆ ಇದೆ. ಹಾಗೆಯೇ ವಿನಾಯಕಚವತಿಗೆ ಶಾಸ್ತ್ರೀಯತೆ ಇದೆ. ಈ ಎರಡೂ ಸಮಾಜ ಶ್ರೇಯಸ್ಸಿಗೆ ಸಂಬಂಧಿಸಿರುವವೆಂದು ತಿಳಿಯುತ್ತಿದ್ದರೂ, ಶಾಸ್ತ್ರೀಯತೆಯನ್ನು ಬಿಟ್ಟು ನಾಗಚವತಿಗೂ, ವಿನಾಯಕ ಚವತಿಗೂ ಅಶಾಸ್ತ್ರೀಯತೆಯನ್ನು ಅಂಟಗಟ್ಟಬಾರದು.

ಕೆಲವರು ಹಿಂದೂ (ಇಂದೂ) ಮತವನ್ನು ರಕ್ಷಿಸುತ್ತೇವೆಂದು, ಹಿಂದೂ ಧರ್ಮಗಳನ್ನು ಕಾಪಾಡುತ್ತೇವೆಂದು ಹೇಳುತ್ತಾ, ಹಿಂದೂಧರ್ಮರಕ್ಷಣೆ ಎಂಬ ನಿನಾದದಿಂದ ಕೆಲವು ಹೆಸರುಗಳಿರುವ ಸಂಘಗಳನ್ನು ಸ್ಥಾಪಿಸಿಕೊಂಡು, ಅವರ ಅಧಿಪತ್ಯಕ್ಕೋಸ್ಕರ ಹಿಂದೂ ಧರ್ಮಗಳನ್ನು ಭಕ್ಷಿಸುತ್ತಿದ್ದಾರೆ. ಅಂತಹವರಿಗೆ ಹಿಂದೂ ಧರ್ಮಗಳಂದರೆ ಏನೊ, ಅವು ಹೇಗಿರುತ್ತವೊ ಸಹ ತಿಳಿಯದು. ಅಂತಹವರ ಹಿಂದೂ ಧರ್ಮಗಳನ್ನು ಕಾಪಾಡುವುದು? ಅಂತಹ ಸಂಸ್ಥೆಗಳು ಇತರ ಮತಗಳ ಮೇಲೆ ದೌರ್ಜನ್ಯ ಮಾಡುತ್ತಾ ಹಿಂದೂತ್ವವು ಶಾಂತಿ ಸ್ವರೂಪವಾದುದು ಅಲ್ಲ ಎನ್ನುವಂತೆ ನಡೆದುಕೊಳ್ಳುತ್ತಿದ್ದಾರೆ. ಅಂತಹವರು ತಮ್ಮ ಹೆಸರು ಪ್ರಖ್ಯಾತಿಗಳಿಗೋಸ್ಕರ ನಮ್ಮಂಥವರನ್ನು ಸಹ ಅವಮಾನಿಸುತ್ತಿದ್ದಾರೆ. ಅಂತಹವರನ್ನು ಲೆಕ್ಕಮಾಡದೆ, ಇಂದೂ ಧರ್ಮಗಳ ಪ್ರಕಾರವೇ ಜ್ಞಾನ ತಿಳಿದು ಪ್ರವರ್ತಿಸಬೇಕು. ಭಗವದ್ಗೀತೆ ತಿಳಿದ ನಂತರ ಪುರಾಣಗಳನ್ನು ಬರೆದ ವ್ಯಾಸನೆ ತಾನು ಪುರಾಣಗಳನ್ನು ಬರೆದು ತಪ್ಪು ಮಾಡಿದ್ದೇನೆಂದು ದುಃಖಪಟ್ಟು ಪಶ್ಚಾತ್ತಾಪದಿಂದ ಕೃಂಗಿಹೋಗಿದ್ದಾನೆ. ಬರೆದ ವ್ಯಾಸನೆ ಬಾಧೆಪಟ್ಟರೆ, ಆ ವಿಷಯ ತಿಳಿಯದೆ ನಾವು ಆ ಪುರಾಣಗಳ ಆಧಾರದಿಂದಲೇ ನಾಗಚವತಿ, ವಿನಾಕಚವತಿ ನಮ್ಮ ಇಷ್ಟಾನುಸಾರ ಮಾಡಿದರೆ ನಾವು ದೈವ ದ್ರೋಹ ಮಾಡಿದಂತೆ. ಮೂಲ ಹಿಂದೂ ಧರ್ಮಗಳನ್ನು ಕೀಳಾಗಿ ನೋಡಿದಂತೆ. ಆದ್ದರಿಂದ ಅಧರ್ಮಗಳಾದ ಪದ್ಧತಿಗಳನ್ನು ಬಿಟ್ಟು ಧರ್ಮಗಳಾದ ಪದ್ಧತಿಗಳನ್ನೆ ಆಚರಿಸಬೇಕು. ಕೃಷ್ಣಾಷ್ಟಮಿ ಯನ್ನು ಹನ್ನೊಂದುದಿನಗಳು ಮಾಡಿದರೆ ವಿನಾಯಕಚವತಿಯನ್ನು ಮಾಡಿಕೊಳ್ಳುವ ಅವಕಾಶ ಇಲ್ಲದಹಾಗೆ ಹೋಗುತ್ತದೆ. ಹನ್ನೊಂದನೆಯ ದಿನ

ವಿನಾಯಕಚವತಿ ಆಗುತ್ತದೆ. ಆ ದಿನದಂದು ಕೃಷ್ಣನು ಮಂಟಪದಲ್ಲಿ ಇರುವುದರಿಂದ ವಿನಾಯಕಚವತಿಗೆ ಮಂಟಪವೆ ಇರುವುದಿಲ್ಲ.

ಭೂಮಿ ಮೇಲೆ ಬಹಳ ಜನರಿಗೆ ಅಲ್ಲದೆ ಒಂದು ವಿಧವಾಗಿ ಎಲ್ಲರಿಗೂ ತಿಳಿಯದ ರಹಸ್ಯವೊಂದು ಇದೆ. ಅದೇ ದೇವರ ಪರಿಪಾಲನೆ. ದೇವರ ಪರಿಪಾಲನೆಯಲ್ಲಿ ಮಹಾಭೂತಗಳು, ಭೂತಗಳು, ಉಪಭೂತಗಳು ಪಾತ್ರಧಾರಿಗಳಾಗಿದ್ದು ಭೂಮಿಮೇಲೆ ಪರಿಪಾಲನೆ ಸಾಗಿಸುತ್ತಿವೆ. ಈ ವಿಷಯ ಭಗವದ್ಗೀತೆಯಲ್ಲಿ ಶಾಸ್ತ್ರಬದ್ಧವಾಗಿದೆ. ದೇವರು ಏನು ಮಾಡುವುದಿಲ್ಲ, ಮಾಡುವುದೆಲ್ಲಾ ಮೂರು ವಿಧಗಳ ಭೂತಗಳೆ. ದೇವರಿಗೆ ವಿರುದ್ಧವಾದ ಕೆಲಸಗಳು ಮಾಡುವವರ ಮೇಲೆ ಭೂತಗಳ ದೃಷ್ಠಿ ಇರುತ್ತದೆಂದು ಸಹ ಒಂದು ಗ್ರಂಥದಲ್ಲಿ ವಿವರವಾಗಿ ಹೇಳಿರುವುದು ನಡೆದಿದೆ. ದೇವತೆಗಳ ದರ್ಶನಾರ್ಥವು ಹೋಗುವಾಗ, ಬರುವಾಗ ಪಾಲ್ಗೊಳ್ಳುವಾಗ, ಮದುವೆಗಳಿಗೆ ಹೋಗುವಾಗ, ಬರುವಾಗ ಹೆಚ್ಚಾಗಿ ಅಪಘಾತಗಳು ನಡೆಯುವುದಕ್ಕೆ ಭೂತಗಳೆ ಕಾರಣವೆಂದು ಸಹ ಹೇಳಿದ್ದೇವೆ. ಪ್ರತಿ ವರ್ಷ ವಿನಾಯಕಚವತಿ ಹಬ್ಬಗಳಲ್ಲಿ ವಿನಾಯಕ ವಿಸರ್ಜನೆಯ ಸಂದರ್ಭದಲ್ಲಿ ಬಹಳ ಪ್ರದೇಶಗಳಲ್ಲಿ ಒಬ್ಬರು, ಇಬ್ಬರು ಇಲ್ಲವೆ ಮೂವರು ಪ್ರಮಾದವಶಾತ್ತು ಮರಣಿಸುವುದು ನಡೆಯುತ್ತಿದೆ. ಪ್ರತಿವರ್ಷ ಹಾಗೆ ನಡೆಯುತ್ತಿದ್ದರೂ ಏಕೆ ಹೀಗೆ ನಡೆಯುತ್ತಿದೆಯೆಂದು ಯಾರಿಗೂ ಅರ್ಥವಾಗುತ್ತಿಲ್ಲ. ಅದು ಭೂತಗಳ ಕೆಲಸ ಎಂದು ಯಾರಿಗೂ ತಿಳಿಯುತ್ತಿಲ್ಲ. ವಿನಾಯಕಚವತಿ ಸಂದರ್ಭದಲ್ಲಿ ದೇಶ ಮೊತ್ತವು ಸಾವಿರಾರುಜನ ಮರಣಿಸುತ್ತಿದ್ದಾರೆ. ಭೂತಗಳಿಂದ ಬರುವ ಅಂತಹ ಅಪಘಾತ (ಪ್ರಮಾದ) ಗಳು ಇಲ್ಲದಹಾಗೆ ಹೋಗಬೇಕೆಂದರೆ ಪಂಚಭೂತಗಳಿಗೆ ಇಷ್ಟವಿಲ್ಲದ ವಿನಾಯಕ ಚವತಿಯನ್ನು ಬಿಟ್ಟು ಭೂತಗಳಿಗೆ ಇಷ್ಟವಿರುವ ದೇವರ ಆರಾಧನೆಯಾದ ಭಗವಂತನ ಜನ್ಮ ದಿನವನ್ನು ಹಬ್ಬವಾಗಿ ಮಾಡಿಕೊಳ್ಳುವುದು ಶುಭವಾಗಿರುವುದು.

ಎಲ್ಲವನ್ನು ಗಮನಿಸಿದ ನಂತರ ಈ ಗ್ರಂಥವನ್ನು ಓದಿದ ಪ್ರತಿಯೊಬ್ಬರು, ಕೃಷ್ಣಾಷ್ಟಮಿಯನ್ನು ಆಚರಣೆ ಮಾಡುವುದಕ್ಕೆ, ಎಲ್ಲರಿಗಿಂತ ಮುಂಚೆ ತಾವೇ

ಪ್ರಾರಂಭಮಾಡಿರಿ. ಕೃಷ್ಣಾಷ್ಟಮಿಯಲ್ಲಿ ವಿನಾಯಕಚವತಿಯಂತೆ ಖರ್ಚು ಇರುವುದಿಲ್ಲ, ಪ್ರಮಾದಗಳು ಇರುವುದಿಲ್ಲ. ಪ್ರತಿ ವರ್ಷ ಪ್ರತಿಮೆಗಳನ್ನು ಕೊಂಡು ತರುವ ಅಗತ್ಯವಿಲ್ಲ. ಮನೆಯಲ್ಲಿನ ಪ್ರತಿಮೆಯನ್ನು ಬೀಧಿಯಲ್ಲಿ ಇಟ್ಟು, ಹನ್ನೊಂದು ದಿನಗಳು ಉತ್ಸವಗಳು ಮಾಡಿ ಆ ಪ್ರತಿಮೆಯನ್ನು ಪುನಃ ಮನೆಯಲ್ಲಿಯೇ ಇಟ್ಟುಕೊಳ್ಳಬೇಕು ಎಂತಹ ಪರಿಸ್ಥಿತಿಯಲ್ಲಿ ಕೃಷ್ಣಪ್ರತಿಮೆಯನ್ನು ನೀರಿನಲ್ಲಿ ವಿಸರ್ಜನೆ ಮಾಡುವುದಾಗಲಿ, ಎಲ್ಲಾದರೂ ಬಿಸಾಡುವುದಾಗಲೀ ನಡೆಯಬಾರದು. ಕೊನೆಯ ದಿನ ಮೆರವಣಿಗೆ ನಂತರ ಕೃಷ್ಣ ಪ್ರತಿಮೆಯನ್ನು ಮನೆಯಲ್ಲಿಯೇ ಇಟ್ಟುಕೊಳ್ಳಬೇಕು. ವಿನಾಯಚವತಿ ಸಮಯದಲ್ಲಿ ಚಂದಾ ವಸೂಲಿಗಳು ಹೆಚ್ಚಾಗಿ ನಡೆಯುತ್ತಿವೆ. ಅದರಲ್ಲಿ ವಿನಾಯಕನ ಭಕ್ತಿಗಿಂತ ಹಣದ ವಸೂಲಿ ಮುಖ್ಯಪಾತ್ರ ವಹಿಸುತ್ತವೆ. ಕೊಡುವುದಕ್ಕೆ ಸಾಮರ್ಥ್ಯ ಇಲ್ಲದವರತ್ತಿರ ಸಹ ಬಲವಂತವಾಗಿ ಹಣವನ್ನು ವಸೂಲಿ ಮಾಡುವುದು ನಡೆಯುತ್ತಿದೆ. ಕೃಷ್ಣಾಷ್ಟಮಿಯಲ್ಲಿ ಅಂತಹ ಪದ್ಧತಿಯೂ ಇರುವುದಿಲ್ಲ. ಮಳೆಗೆ ನೆನೆಯದಂತೆ ಮಂಟಪವನ್ನು ಏರ್ಪಡಿಸಿಕೊಂಡು ಅದರಲ್ಲಿ ಕೃಷ್ಣಪ್ರತಿಮೆಯನ್ನಿಟ್ಟು, ಕಾಯಿ ಹೊಡೆದು ಆರಾಧಿಸಿದರೆ ಸಾಕು. ಕೃಷ್ಣನ ಮುಂದೆ ವಿನಾಯಕನ ಮಂಟಪದಲ್ಲಿ ಇಟ್ಟಂತೆ ಸಿನಿಮಾ ಹಾಡುಗಳನ್ನು ಇಡುವುದಾಗಲಿ, ಕಾಲಕ್ಷೇಪಕ್ಕೆ ಜೂಜಾಟವಾಡುವುದಾಗಲಿ ಒಳ್ಳೆಯದಲ್ಲ. ಕರ್ನಾಟಕ ಪ್ರಾಂತ್ಯದಲ್ಲಿ ಪ್ರತಿ ವಿನಾಯಕ ಮಂಟಪದಲ್ಲಿಯು ಜೂಜಾಟವಾಡುವುದು ಅಭ್ಯಾಸವಾಗಿದೆ. ಅಂತಹ ಕೆಲಸಗಳು ಕೃಷ್ಣಪ್ರತಿಮೆ ಮುಂದೆ ಮಾಡಬಾರದು. ಕೃಷ್ಣಮಂಟಪದಲ್ಲಿ ಹನ್ನೊಂದು ದಿನಗಳು ಪ್ರತ್ಯೇಕವಾಗಿ ಗೀತಾ ಪಠಣೆ ನಡೆಯುವಂತೆ ಏರ್ಪಾಟು ಮಾಡಬೇಕು. ಅದು ಗಾಯಕರ ಗಾನ ಮಾಡಿದ ಭಗವದ್ಗೀತೆ ರಿಕಾರ್ಡ್ ಇಡಬಾರದು. ಶುಚಿಶುಭ್ರತೆಗಳಿಂದ ಯಾರಾದರೂ ಗೀತೆಯನ್ನು ಉದಯ, ಸಾಯಂಕಾಲ ಪಠಿಸಬೇಕು. ಕೃಷ್ಣನ ಮಂಟಪದಲ್ಲಿ ವೇದಮಂತ್ರಗಳು ನಿಷೇಧ. ಕೃಷ್ಣನ ಪೂಜೆಯಲ್ಲಿ ವೇದಮಂತ್ರಗಳನ್ನು ಬಳಸಬಾರದು. ಮಂತ್ರರಹಿತವಾದ ಸಾಧಾರಣ ಪೂಜೆ ಮಾಡುವುದು ಒಳ್ಳೆಯದು. ಮತ್ತು ಪಾನೀಯಗಳು ಕುಡಿದವರು ಕಷ್ಣಪ್ರತಿಮೆ ಇರುವ ಪರಿಸರ ಪ್ರಾಂತ್ಯದೊಳಗೆ ಹೋಗಬಾರದು. ಒಂದು ವೇಳೆ ಹೋದರೂ ಆಗ ಏನು ಆಗುವುದಿಲ್ಲ, ಆದರೆ ನಂತರ ಅವರ ಆರೋಗ್ಯದಲ್ಲಿ

ಎಷ್ಟೋ ವ್ಯತ್ಯಾಸ ಬರುತ್ತದೆ. ಗುಣವಾಗದ ರೋಗಗಳು ತಗಲಿಕೊಳ್ಳುತ್ತವೆ. ರೋಗಗಳು ಸಹ ಭೂತಗಳೆ ಆದ್ದರಿಂದ, ಭೂತಗಳು ಕೃಷ್ಣನನ್ನು ಅಂದರೆ ಭಗವಂತನನ್ನು ಅವಹೇಳನವಾಡಿದವರನ್ನು ಬಿಡುವುದಿಲ್ಲ. ಈಗಲೇ ಭಗವಂತನನ್ನು ಬಿಟ್ಟು ಇತರೆ ದೇವತೆಗಳನ್ನು ಆರಾಧಿಸುವವರನ್ನು ಪ್ರಮಾದಗಳಿಗೆ ಗುರಿಯಾಗುವಂತೆ, ಆರೋಗ್ಯದಲ್ಲಿ ಅನೇಕ ಸಮಸ್ಯೆಗಳು ಬರುವಂತೆ ಭೂತಗಳು ಮಾಡುತ್ತಿವೆ. ಆದ್ದರಿಂದ ಅವರ ಕೋಪಕ್ಕೆ ಗುರಿಯಾಗದೆ ಅನ್ಯದೇವತೆಗಳನ್ನು ಬಿಟ್ಟು ಕೃಷ್ಣಾಷ್ಟಮಿಯನ್ನು ವಾಡಿದವರಿಗೆ ದೇವರ ಪರಿಪಾಲನೆಯಲ್ಲಿ ಪಾತ್ರಧಾರಿಗಳಾದ ಭೂತಗಳು ಸಹಕರಿಸುತ್ತವೆ. ಭಗವಂತನು ಹೇಳಿದ ಜ್ಞಾನವನ್ನು ತಿಳಿದುಕೊಂಡರೆ, ಶರೀರದಲ್ಲಿ ರೋಗಗಳಾಗಿರುವ ಭೂತಗಳು ಸಹ ಅಂಥವರನ್ನು ಗೌರವಿಸಿ ತಮ್ಮ ರೋಗಗಳನ್ನು ಅವನಿಗೆ ಇಲ್ಲದಹಾಗೆ ಮಾಡುತ್ತವೆ. ಅಷ್ಟೇ ಅಲ್ಲದೆ ಇತ್ತೀಚೆಗೆ ನಡೆಯುತ್ತಿರುವ ಪ್ರಕೃತಿ ವೈಪರಿತ್ಯಗಳು ಚಿಕ್ಕದರಿಂದ ದೊಡ್ಡದರವರೆಗೂ ಎಲ್ಲವೂ ದೇವರ ಪಾಲಕರಾದ ಭೂತಗಳಿಂದಲೇ ನಡೆಯುತ್ತಿವೆ. ಕೃಷ್ಣಾಷ್ಟಮಿಯನ್ನು ಭಕ್ತಿಯಿಂದ ಮಾಡುವುದರಿಂದ ಆ ಪ್ರಾಂತದಲ್ಲಿ ಪ್ರಕೃತಿ (ಭೂತಗಳ) ವೈಪರಿತ್ಯಗಳು ಕಡಿಮೆಯಾಗುತ್ತವೆ. ಮಳೆ ಸಹ ಭೂತಗಳಿಂದಲೇ ಬರುತ್ತವೆ. ಆದ್ದರಿಂದ ಭಗವಂತನ ಭಕ್ತಿ ಹೊಂದಿರುವ ಪ್ರಾಂತದಲ್ಲಿ ಮಳೆಗಳು ಸಕ್ರಮವಾಗಿ ಸುರಿಯುತ್ತದೆ. ಇದೆಲ್ಲವೂ ಕವಿತೆ ಅಲ್ಲ, ನಗ್ನಸತ್ಯ. ಭೂತಗಳೆಂದರೆ ಏನೊ, ದೇವರ ಪಾಲನೆ ಎಂದರೆ ಏನೊ, ಯಾರಿಗೂ ತಿಳಿಯದೆಂದಿದ್ದೇವೆ ಅಲ್ಲವೆ! ಆ ವಿಷಯಗಳು ತಿಳಿಯಬೇಕೆಂದರೆ ನಾವು ರಚಿಸಿದ **"ದೇವ್ವಗಳ–ಹಾಗೂ ಭೂತಗಳ ಯಥಾರ್ಥಸಂಘಟಣೆಗಳು"** ಎಂಬ ಗ್ರಂಥವನ್ನು ಓದಿದರೆ ದೇವರ ಪಾಲನೆ ಎಂದರೆ ಏನೊ, ಭೂತಗಳು ಎಂದರೆ ಏನೊ ತಿಳಿಯುತ್ತದೆ.

ನೀವು ತಿಳುವಳಿಕೆ ಇಲ್ಲದವರು ಮಾತ್ರ ಅಲ್ಲ. ಆದರೆ ಹೇತುಬದ್ಧವಾಗಿ ಆಲೋಚಿಸದಿರುವುದರಿಂದ ತಿಳುವಳಿಕೆ ಇಲ್ಲದವರು ಪ್ರವರ್ತಿಸುವಂತೆ ಪ್ರವರ್ತಿಸುತ್ತಿದ್ದೀರಾ. ಅದು ಹೇಗೆಂದರೆ! ಕೃಷ್ಣನಿಗೆ ಚರಿತ್ರೆ ಇದೆ, ಕೃಷ್ಣನು

ನಮ್ಮಂತೆ ಹುಟ್ಟಿದ್ದಾನೆ, ಆತನು ಹುಟ್ಟಿದ ತಾರೀಖು ಇದೆ. ಆತನು ಮರಣಿಸಿದ ವರ್ಷ ಇದೆ. ಆದರೆ ವಿಘ್ನೇಶ್ವರನು ಹುಟ್ಟಿರುವುದೆ ಇಲ್ಲ, ಆತನ ಚರಿತ್ರೆ ಇಲ್ಲ. ಕೇವಲ ಪುರಾಣಗಳಲ್ಲಿ ಕಲ್ಪಿಸಲ್ಪಟ್ಟಿದ್ದಾನೆ. ಮಾಯೆಯಿಂದ ಕಲ್ಪಿಸಲ್ಪಟ್ಟು ನಿಜವಾದ ಭಗವಂತನಂತೆ ಪೂಜಿಸಲ್ಪಡುತ್ತಿದ್ದಾನೆ. ನಿಜಕ್ಕೆ ವಿನಾಯಕನು ಇದ್ದಾನಾ ಇಲ್ಲವಾ? ಎಂದು ಯಾರೂ ಯೋಚಿಸದೆ ಕುರುಡರಂತೆ ಪ್ರವರ್ತಿಸುವುದರಿಂದ, ನಾಸ್ತಿಕವಾದಿಗಳು ಹೇತುಬದ್ಧತೆ ಇಲ್ಲದ ವಿನಾಯಕನನ್ನು ಇಲ್ಲ ಎಂಬುದಲ್ಲದೆ, ಶಾಸ್ತ್ರಗಳನ್ನು ತಿಳಿಸಿದ ದೇವರನ್ನೆ ಇಲ್ಲವೆನ್ನುತ್ತಿದ್ದಾರೆ. ವ್ಯಾಸನು ಅಜ್ಞಾನ ದಿಶೆಯಲ್ಲಿರುವ ವಯಸ್ಸಿನಲ್ಲಿ ಪುರಾಣಗಳು ಬರೆಯುವುದು, ಅದರಲ್ಲಿ ವಿನಾಯಕ ಪಾತ್ರವನ್ನು ಬರೆದಿರುವುದು ನಡೆದಿದೆ. ಪುರಾಣಗಳೆಲ್ಲವೂ ಕಾಲಕ್ಷೇಪಕ್ಕೆ ಬರೆಯಲ್ಪಟ್ಟವೆ ಹೊರತು, ಕರ್ಮಕ್ಷೇಪಕ್ಕೆ ಅಲ್ಲ. ವಿನಾಯಕನ ಜೀವನವನ್ನು ಕುರಿತು ಯಾವುದು ತಿಳಿಯದ ಮನುಷ್ಯರು ವಿನಾಯಕನ ಉತ್ಸವಗಳು ಮಾಡುವುದರಲ್ಲಿ ಮುಂದಿದ್ದಾರೆ. ಕೃಷ್ಣನ ಜೀವನ ತಿಳಿದರೂ, ಕೃಷ್ಣನು ಮಾನವರ ಜೀವನಕ್ಕೆ ಸಂಬಂಧಿಸಿರುವ ಮತ್ತು ಮನುಷ್ಯ ಕರ್ಮಗಳಿಂದ ಹೊರಬೀಳುವ ಜ್ಞಾನವನ್ನು ಹೇಳಿದರೂ, ಕೃಷ್ಣಾಷ್ಟಮಿ ಮಾಡದವರು, ವಿನಾಯಕನ ಜೀವನವೇನೊ ತಿಳಿಯದಿದ್ದರೂ ಮತ್ತು ವಿನಾಯಕನು ಮನುಷ್ಯನಿಗೆ ಅಗತ್ಯವಾದ ಯಾವ ಜ್ಞಾನವನ್ನು ಹೇಳದಿದ್ದರೂ, ವಿನಾಯಕಚವಿತಿಯನ್ನು ಮಾಡುತ್ತಿದ್ದಾರೆ. ನಾನು ನಿಮ್ಮನ್ನು ಹಿಂದೂಮತವನ್ನು ಬಿಟ್ಟು ಬೇರೆ ಮತದೊಳಗೆ ಬನ್ನಿ ಎಂದು ಹೇಳುತ್ತಿಲ್ಲ. ಹಿಂದೂ (ಇಂದೂ) ಪಥದಲ್ಲಿನ ಔನ್ನತ್ಯವನ್ನು ತಿಳಿದುಕೊಂಡು, ಇಂದೂಧರ್ಮಗಳನ್ನು ತಿಳಿಸಿದ ಕೃಷ್ಣನನ್ನು ಭಗವಂತನಾಗಿ ಗುರುತಿಸಿ, ಪ್ರತಿ ವರ್ಷ ಕೃಷ್ಣಾಷ್ಟಮಿಯನ್ನು ಮಾಡಿರೆಂದು, ಹಾಗೆ ಮಾಡುವುದರಿಂದ ನಿಮ್ಮ ಕರ್ಮಗಳು ಹೋಗುತ್ತವೆಂದು ತಿಳಿಸುತ್ತಿದ್ದೇವೆ.

ಕೃಷ್ಣನನ್ನು ಭಗವಂತನಾಗಿ ಗುರುತಿಸದೆ ಇರುವ ಕಾರಣದಿಂದ ಆತನನ್ನು ಅಶ್ರದ್ಧೆ ಮಾಡಿದ್ದೇವೆ. ಅಷ್ಟೇ ಅಲ್ಲದೆ ಕೃಷ್ಣನನ್ನು ಶೃಂಗಾರಪುರುಷನನ್ನಾಗಿ ಕವಿಗಳೆಲ್ಲ ಬರೆಯುವುದರಿಂದ, ಕೃಷ್ಣನನ್ನು ಚಿಲ್ಲರೆ ಮನುಷ್ಯನನ್ನಾಗಿ ಲೆಕ್ಕ

ಹಾಕಿಕೊಂಡಿದ್ದೇವೆ. ಭಾಗವತಪುರಾಣಗಳಲ್ಲಿ ಕೃಷ್ಣನು ಮಧುರಗೆ ಹೋಗಿ ಕಂಸನನ್ನು ಸಾಯಿಸುವುದಕ್ಕಿಂತ ಮೊದಲೆ ಗೋಪಿಕೆಗಳ ಜೊತೆ ತಿರುಗಾಡಿದ್ದಾನೆಂದು, ಅವರೊಂದಿಗೆ ಶೃಂಗಾರದಲ್ಲಿ ಪಾಲ್ಗೊಳ್ಳುತ್ತಿದ್ದನೆಂದು, ಸ್ವತಃ ಪೊತನ ಕವಿಯೆ ತೆಲುಗಿನಲ್ಲಿ ಬರೆದಿದ್ದಾನೆ. ಸಂಸ್ಕೃತದಲ್ಲಿ ವ್ಯಾಸನು ಸ್ವಲ್ಪ ವಿಡ್ಡೂರವಾಗಿ ಬರೆದರೆ, ಅದನ್ನು ತೆಲುಗಿನೊಳಗೆ ಅನುವಾದಿಸಿದ ಪೊತನ ಇನ್ನೂ ಕಲ್ಪಿತಮಾಡಿ ಮತ್ತಷ್ಟು ವಿಡ್ಡೂರವಾಗಿ ಬರೆದಿದ್ದಾನೆ. ಕೃಷ್ಣನು ಮಧುರೆಗೆ ಹೋಗಿರುವುದು, ಕಂಸನನ್ನು ಸಾಯಿಸಿರುವುದು ಆತನಿಗೆ ಹನ್ನೊಂದು ವರ್ಷಗಳ ವಯಸ್ಸಿನಲ್ಲಿ ನಡೆದಿದೆ. ಹನ್ನೊಂದು ವರ್ಷಗಳಿಗೆ ಯಾವ ಮನುಷ್ಯನಾದರೂ ಸ್ತ್ರೀಯರಜೊತೆ ಸಂಯೋಗ ಮಾಡುತ್ತಾರಾ? ಶೃಂಗಾರದಲ್ಲಿ ಪಾಲ್ಗೊಳ್ಳುತ್ತಾನಾ? ಈ ಮಾತುಗಳು ವಿಡ್ಡೂರ ಅಲ್ಲವೆ! ಆ ವಿಧವಾಗಿ ಕೃಷ್ಣನ ಕುರಿತು ತಪ್ಪಾಗಿ ಬರೆಯುವುದರಿಂದ, ಅದರ ಆಧಾರದಿಂದ ಮನುಷ್ಯರಲ್ಲಿ ಮಾಯೆ ಗಾಢವಾಗಿ ಕೆಲಸ ಮಾಡಿ, ಕೃಷ್ಣನನ್ನು ಅಲ್ಲರಿ ಮನುಷ್ಯನನ್ನಾಗಿ ಲೆಕ್ಕಿಸಿಕೊಳ್ಳುವಂತೆ ಮಾಡಿದೆ. ಆದ್ದರಿಂದ ಕೃಷ್ಣನ ವಿಷಯ ಬಹಳಜನ ಆಲೋಚಿಸದೆ ಹೋಗಿದ್ದಾರೆ. 90 ವರ್ಷಗಳ ವಯಸ್ಸಿನಲ್ಲಿ ಕೃಷ್ಣನು ಭಗವದ್ಗೀತೆಯನ್ನು ಹೇಳಿದ ನಂತರ, ಪುರಾಣಗಳನ್ನು ಬರೆದ ವ್ಯಾಸನು ತನ್ನ ತಪ್ಪನ್ನು ತಿಳಿದುಕೊಂಡು, ಪುರಾಣಗಳಿಗೆ ವಿರುದ್ಧವಾದ ಭಗವದ್ಗೀತೆಯನ್ನು ಸಂಸ್ಕೃತದಲ್ಲಿ ಶ್ಲೋಕಗಳ ರೂಪವಾಗಿ ಬರೆದಿದ್ದಾನೆ. ಅಂತಹ ವ್ಯಾಸನೆ ತನ್ನ ತಪ್ಪನ್ನು ತಾನು ತಿಳಿದುಕೊಂಡು ತನ್ನ ಶ್ಲೋಕಗಳಲ್ಲಿ ಕೃಷ್ಣನು ಹೇಳಿದ ಧರ್ಮಗಳನ್ನು ತಿಳಿಸಿದ್ದಾನೆ. ವೇದಪಠನ, ತಪಸ್ಸು, ಯಜ್ಞಗಳು ಧರ್ಮಗಳಲ್ಲವೆಂದು ಅವೆಲ್ಲಾ ಅಧರ್ಮಗಳೆಂದು ತಾನು ಬರೆದ ಶ್ಲೋಕಗಳಲ್ಲಿಯೇ ಹೇಳಿದ್ದಾನೆ. ಅಷ್ಟುದೊಡ್ಡ ಕಾರ್ಯಗಳೆ ಅಧರ್ಮಗಳಾದಾಗ, ನಾವು ಮಾಡುವ ವಿನಾಯಕಚವತಿ ಸಹ ಅಧರ್ಮ ವಾಗುತ್ತದೆ. ಆದ್ದರಿಂದ ಈಗಿನಿಂದ ವಾಸ್ತವ ವಿಷಯವನ್ನು ತಿಳಿದುಕೊಂಡು, ವಿಶ್ವವ್ಯಾಪಿ, ಸೃಷ್ಟಿಕರ್ತನಾದ ದೇವರು, ಭಗವಂತನಾಗಿ ಕೃಷ್ಣನಾಗಿ ಬಂದಿದ್ದಾನೆ. ದೇವರೆ ಭಗವಂತನಾಗಿ ಗೀತಾಜ್ಞಾನ ಹೇಳಿದ್ದಾನೆಂದು, ಅದೇ ಭಗವದ್ಗೀತೆ ಎಂದು ತಿಳಿದು ಕೃಷ್ಣನನ್ನು ಆರಾಧಿಸಿ ದೇವರಿಗೆ ಹತ್ತಿರವಾಗುವುದಕ್ಕೆ ಪ್ರಯತ್ನಿಸೋಣ. ದೇವರ ಹತ್ತಿರಕ್ಕೆ ಸೇರಬೇಕೆಂದರೆ

ಆತನ ವಿಳಾಸ ಏನೊ ನಮಗೆ ತಿಳಿಯದು. ಆ ವಿಳಾಸವನ್ನು ಹೇಳುವವನು ಯಾರೊ ಅವನೆ ಭಗವಂತನು, ಆ ಭಗವಂತನೆ ಕೃಷ್ಣನು. ಆದ್ದರಿಂದ ಕೃಷ್ಣನು ಶರೀರದೊಂದಿಗೆ ನಮ್ಮ ನಡುವೆ ಇದ್ದಾಗ ಆತನು ಭಗವಂತನಾದ ದೇವರೆಂದು, ಹಾಗೆ ಆತನು ನಮ್ಮ ನಡುವೆ ಶರೀರದಿಂದ ಇಲ್ಲದಿರುವಾಗ ದೇವರಾದ ಭಗವಂತನೆಂದು ಹೇಳಬಹುದು. ಅರ್ಥವಾಗಲಿಲ್ಲವೇನೊ ಮತ್ತೊಂದು ಸಲ ಶ್ರದ್ಧೆಯಿಂದ ಕೇಳಿರಿ. ಕೃಷ್ಣನು ಭೂಮಿಮೇಲಿರುವ ದ್ವಾಪರಯುಗದಲ್ಲಿ ಭಗವಂತನಾದ ದೇವರು ಎಂದೂ, ಕೃಷ್ಣನು ಭೂಮಿಮೇಲೆ ಇಲ್ಲದ ಕಲಿಯುಗದಲ್ಲಿ ದೇವರಾದ ಭಗವಂತನೆಂದೂ ಹೇಳಬಹುದು. ಇಲ್ಲಿಯವರೆಗೂ ಬಹಳಜನ ಸ್ವಾಮೀಜಿಗಳು, ಬೋಧಕರು ದೇವರಿಗೂ, ಭಗವಂತನಿಗೂ ವ್ಯತ್ಯಾಸ ತಿಳಿಯದೆ ಹೇಳಿದ್ದಾರೆ. ಈಗ ಹಾಗಲ್ಲದೆ ಯಾರು ದೇವರೊ, ಯಾರು ಭಗವಂತನೊ ಗುರುತಿಸಿ ಹೇಳಿಕೊಳ್ಳಬೇಕು.

ಇಲ್ಲಿಯವರೆಗೂ ಕೃಷ್ಣನ ಮೇಲೆ ನಮಗಿರುವ ಊಹೆಗಳೆಲ್ಲವೂ ತೆಗೆದುಹಾಕಿ ಭಗವಂತನಾದ ಕೃಷ್ಣನನ್ನು ತಿಳಿದುಕೊಳ್ಳೋಣ. ಇಲ್ಲಿಯವರೆಗೂ ಭಗವಂತನು ಹೇಳಿದ ಜ್ಞಾನವನ್ನು ತಿಳಿಯದ ನಾವು ಆತನು ತಿಳಿಸಿದ ಸಾರಾಂಶವನ್ನು ಕುರಿತು ತಿಳಿದುಕೊಳ್ಳೋಣ. ಕೃಷ್ಣನ ಮೇಲೆ ಭಕ್ತಿ ಇರುವವರು ಗೋಪಿ, ಗೋಪಿಕರು ಅಂದುಮಾತ್ರವಲ್ಲ, ಇಂದಿಗೂ ಸಹ ಇದ್ದಾರೆಂದು ನಿರೂಪಿಸೋಣ. ಕೃಷ್ಣನ ಮೇಲೆ ಭಕ್ತಿ ಭಾವವನ್ನು ಬೆಳೆಸಿಕೊಂಡು ಅಪಾರ್ಥ ಭಾವವನ್ನು ಇಲ್ಲದಂತೆ ಮಾಡಿಕೊಳ್ಳೋಣ. ಭೂಮಿಮೇಲೆ ಕೃಷ್ಣನು ಒಬ್ಬನೆ ಭಗವಂತನೆಂದು ಇತರರಿಗೆ ತಿಳಿಸೋಣ. ಆ ನೇತೃತ್ವದಲ್ಲಿಯೇ ವಿನಾಯಕ ಚವತಿಯನ್ನು ಬಿಟ್ಟು, ಕೃಷ್ಣಾಷ್ಟಮಿಯನ್ನು ಮಾಡೋಣ. ನಾವು ಮಾಡುವುದೆ ಅಲ್ಲದೆ ಎಲ್ಲರಿಗೂ ಹೇಳಿ ಮಾಡಿಸೋಣ. ಹಿಂದೂತ್ವವು ಮತವಲ್ಲ ಪಥ (ದಾರಿ) ಎಂದು ತಿಳಿಸೋಣ. ಭೂಮಿಮೇಲೆ ಯಾವ ಮತದವನಾದರೂ ಈ ಪಥದೊಳಗೆ ಬರಬೇಕಾಗಿದ್ದೆ ಎಂದು ತಿಳಿಯಪಡಿಸುತ್ತೇವೆ. ನಿಮ್ಮ ಮತದಲ್ಲಿ ಯಾವ ದೇವರಿದ್ದಾನೊ ಆ ದೇವರೆ ಈ ಭಗವಂತನೆಂದು ಅರ್ಥವಾಗುವಂತೆ

ಮಾಡೋಣ. ಇತರರನ್ನು ಮಾರ್ಪಡಿಸಬೇಕೆಂದರೆ ಮೊದಲು ನಾವು ಬದಲಾಗಬೇಕು. ನಾವು ಬದಲಾದರೆ ನಮ್ಮ ದಾರಿಯನ್ನೇ ಇತರರು ಅನುಸರಿಸುತ್ತಾರೆ. ಆದ್ದರಿಂದ ಮೊದಲು ನಾವು ಬದಲಾವಣೆಯಾಗುವುದಕ್ಕೆ ಕೃಷ್ಣಾಷ್ಟಮಿಯಿಂದಲೇ ಪ್ರಾರಂಭಮಾಡೋಣ.

# ಪಾರನ (ಕನುಮ) ಹಬ್ಬಗಳು

ಕನುಮ ಹಬ್ಬ ಎನ್ನುವುದು ನಿಜಕ್ಕೆ ಹಬ್ಬವಲ್ಲ. ಈ ಹಬ್ಬವಲ್ಲದ ಹಬ್ಬ ಪ್ರಜೆಗಳಲ್ಲಿ ಹಬ್ಬಗಳಿಗಿಂತ ಪ್ರಾಮುಖ್ಯತೆ ಹೊಂದಿದೆ. ಇದಕ್ಕೆ ಅನೇಕ ಪ್ರಾಂತ್ಯಗಳಲ್ಲಿ ಅನೇಕ ಹೆಸರುಗಳು ಇವೆ. ಇದನ್ನು ಕೆಲವುಕಡೆ ಕನುಮ ಹಬ್ಬ ಎನ್ನುತ್ತಿರುವಾಗ, ಕೆಲವು ಸ್ಥಳಗಳಲ್ಲಿ ಪಾರನ ಹಬ್ಬ ಎನ್ನುತ್ತಿದ್ದಾರೆ. ಇದು ಪ್ರತ್ಯೇಕವಾದ ಹಬ್ಬವಲ್ಲದಿದ್ದರೂ ಪ್ರಾಮುಖ್ಯತೆ ಹೊಂದಿದೆಯೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಆದ್ದರಿಂದ ಈ ಹಬ್ಬವನ್ನು ಪ್ರತಿ ಹಬ್ಬದ ಹಿಂದೆ ಪ್ರಜೆಗಳು ತಗಲಿಸಿಕೊಂಡಿದ್ದಾರೆ. ಇದಕ್ಕು ಮುನ್ನ ನಾವು ಹೇಳಿಕೊಂಡ **ಯುಗಾದಿ** ಯಾಗಲಿ, **ಸಂಕ್ರಾಂತಿ** ಯಾಗಲಿ, ದಶರಾ ಯಾಗಲಿ ಮುಗಿದುಹೋದ ಮರುದಿನವೆ ಈ ಹಬ್ಬವನ್ನು ಆರ್ಯ ವೈಶ್ಯರು ಬಿಟ್ಟು ಎಲ್ಲರೂ ವಿಧಿಯಾಗಿ ಆಚರಿಸುತ್ತಿರುತ್ತಾರೆ. ಆ ದಿನ ಮಾಸಾಲೆಯಿಂದ ಕೂಡಿದ ಮಾಂಸಾಹಾರವನ್ನು ಪ್ರೀತಿಯಿಂದ ತೆಗೆದು ಕೊಳ್ಳುತ್ತಿರುತ್ತಾರೆ. ಹಬ್ಬಗಳನ್ನು ಹೆಂಗಸರು ಕುತೂಹಲದಿಂದ ಮಾಡಿದರೆ ಪಾರನ ಹಬ್ಬವನ್ನು ಗಂಡಸರು ಸಹ ಕುತೂಹಲದಿಂದ ಮಾಡುತ್ತಾರೆ. ಇತರ ಹಬ್ಬದದಿನಗಳಲ್ಲಿಲ್ಲದ ಹುಷಾರು ಪಾರನ ಹಬ್ಬಗಳಲ್ಲಿ ಕಾಣಿಸುತ್ತಿರುತ್ತದೆ. ಪಾರನ (ಕನುಮ) ಹಬ್ಬ ಮೊದಲು ಹೇಗೆ ಪ್ರಾರಂಭವಾಗಿದೆಯೋ ಸ್ವಲ್ಪ ತಿಳಿದು ಕೊಳ್ಳೋಣ.

ಮುಖ್ಯವಾಗಿ ಹೇಳಿಕೊಂಡರೆ ಹಬ್ಬಗಳನ್ನು ಎರಡು ವಿಧಗಳಾಗಿ ವಿಭಜಿಸಿಕೊಳ್ಳಬಹುದು. ಮೊದಲು ಹಬ್ಬಗಳು ತಯಾರಾದಾಗ ಎರಡು ವಿಧಗಳ

ಹಬ್ಬಗಳಿರಲಿಲ್ಲ. ನಂತರ ಸ್ವಲ್ಪಕಾಲಕ್ಕೆ ಮಾಯಾ ಪ್ರಭಾವ ಹಬ್ಬಗಳ ಮೇಲೆ ಸಹ ಹರಡುವುದರಿಂದ, ಆಧ್ಯಾತ್ಮಿಕ ಅರ್ಥದಿಂದ ಕೂಡಿಕೊಂಡ ಹಬ್ಬಗಳು ದೇವತೆಗಳ ಹಬ್ಬಗಳಾಗಿ ಬದಲಾಗಿ ಹೋಗಿರುವುದರಿಂದ, ಅವುಗಳನ್ನು ಎರಡು ವಿಧಗಳ ಹಬ್ಬಗಳೆಂದು ಹೇಳಿಕೊಳ್ಳಬೇಕಾಗಿ ಬಂದಿದೆ. ಅವುಗಳನ್ನೆ ಕ್ಷುದ್ರದೇವತೆಗಳ ಹಬ್ಬಗಳೆಂದು, ಮಹಾದೇವತೆಗಳ ಹಬ್ಬಗಳೆಂದು ಹೇಳಿಕೊಳ್ಳುತ್ತಿದ್ದೇವೆ. ಇದಕ್ಕೂ ಮುಂಚೆ ನಾವು ಹೇಳಿಕೊಂಡ ಹಬ್ಬಗಳೆಲ್ಲ ಮಹಾದೇವತೆಗಳ ಹಬ್ಬಗಳಾಗಿದ್ದು, ಅವು ಅಲ್ಲದೆ ಗ್ರಾಮದೇವತೆಗಳನ್ನು ಪೂಜಿಸುವ ಹಬ್ಬಗಳೆಲ್ಲ ಕ್ಷುದ್ರದೇವತೆಗಳ ಹಬ್ಬಗಳಾಗಿ ಹೇಳಲ್ಪಡುತ್ತಿವೆ. ಕ್ಷುದ್ರದೇವತೆಗಳೆನ್ನುವ ಗ್ರಾಮದೇವತೆಗಳ ಹಬ್ಬಗಳಲ್ಲಿ ಆರಾಧನೆ ಹೆಸರಿನಲ್ಲಿ ಪ್ರಾಣಿ ಬಲಿಗಳು ನಡೆಯುತ್ತಿದ್ದವು. ಆ ದೇವತೆಗಳು ಸಹ ಪ್ರಾಣಿಬಲಿಗಳನ್ನೆ ಕೋರುತ್ತಿದ್ದರು. ಬಲಿ ಕೊಟ್ಟ ಪ್ರಾಣಿಗಳ ಮಾಂಸವನ್ನು ಆ ದಿನ ಎಲ್ಲರೂ ತಿನ್ನುವುದು ಈಗಲೂ ನಡೆಯುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೆ. ಕಳೆದ ಮೂರು ಯುಗಗಳಲ್ಲಿ ಇಲ್ಲದ ಕ್ಷುದ್ರದೇವತೆಗಳ ಪೂಜೆಗಳೂ, ಪ್ರಾಣಿಬಲಿಗಳು ಕಲಿಯುಗ ಮೊದಲಿನಿಂದಲೇ ಪ್ರಾರಂಭವಾಗಿವೆ. ಕ್ಷುದ್ರದೇವತೆಗಳ ಪೂಜೆಗಳು ಸಹ ಮೊದಲು ಹೇಗೆ ಪ್ರಾರಂಭವಾಗಿವೆಯೋ ಸ್ವಲ್ಪ ತಿಳಿದುಕೊಳ್ಳೋಣ.

ವಿಶ್ವವೊಂದರ ಹುಟ್ಟುವಿಕೆಗೆ ಗುರುತಿಗಾಗಿ ಯುಗಾದಿಯನ್ನು ಮೊದಲ ಹಬ್ಬವಾಗಿ ಎಲ್ಲರೂ ಮಾಡಿಕೊಳ್ಳುತ್ತಿದ್ದರು. ಯುಗಾದಿ ಹಬ್ಬ ಚೈತ್ರಮಾಸದಲ್ಲಿ ಬೇಸಿಗೆಕಾಲ ನಡೆಯುವುದು ಎಲ್ಲರಿಗೂ ತಿಳಿದ ವಿಷಯವೆ. ಕೃತಯುಗದಲ್ಲಿ ಭೂಮಿಮೇಲೆ ಜನ ಸಂಖ್ಯೆ ಕಡಿಮೆ ಇದ್ದ ದಿನಗಳವು. ಈಗಿರುವಂತೆ ಆ ಕಾಲದಲ್ಲಿ ಪಟ್ಟಣಗಳು ಇಲ್ಲ, ಸಾರಿಗೆ ಸೌಕಾರ್ಯವೂ ಇರುತ್ತಿರಲಿಲ್ಲ. ಅಲ್ಲಲ್ಲಿ ಚಿಕ್ಕ ಚಿಕ್ಕ ಹಳ್ಳಿಪ್ರಾಂತ್ಯಗಳು ಇರುತ್ತಿದ್ದವು. ಈಗಿನಂತೆ ಉದ್ಯೋಗಗಳು ಆಗಿರಲಿಲ್ಲ. ಎಲ್ಲರೂ ವ್ಯವಸಾಯವನ್ನೆ ವೃತ್ತಿಯಾಗಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ವ್ಯವಸಾಯ ಭೂಮಿಗಳು ಕಡಿಮೆ, ಅರಣ್ಯಪ್ರದೇಶ ಹೆಚ್ಚಾಗಿರುತ್ತಿತ್ತು. ಅರಣ್ಯಪ್ರದೇಶದಲ್ಲಿ ಪ್ರಾಣಿಗಳು, ಪಕ್ಷಿಗಳು ಸಂವೃದ್ಧಿಯಾಗಿರುತ್ತಿದ್ದವು. ಬೇಸಿಗೆಕಾಲ

ವ್ಯವಸಾಯದ ಕೆಲಸಗಳೆಲ್ಲ ಮುಗಿದುಹೋಗಿ ಪ್ರಜೆಗಳೆಲ್ಲರೂ ಕೆಲಸವಿಲ್ಲದೆ ಖಾಲಿಯಾಗಿರುವ ಸಮಯದಲ್ಲಿಯೆ ಯುಗಾದಿ ಹಬ್ಬ ಬರುತ್ತಿದೆ. ಯುಗಾದಿ ಹಬ್ಬವನ್ನು ಮಾಡಿಕೊಂಡ ಪ್ರಜೆಗಳು ಮರುದಿನ ಕೆಲಸವಿಲ್ಲದಿರುವುದರಿಂದ ಎಲ್ಲರೂ ಸೇರಿ ಸಲಿಗೆಗೆ ಹತ್ತಿರದಲ್ಲಿರುವ ಕಾಡಿಗೆ ಬೇಟೆಯಾಡುವುದಕ್ಕೆ ಹಬ್ಬ ಮುಗಿದಹೋದ ರಾತ್ರಿಗೆ ಹೋಗುತ್ತಿದ್ದರು. ಆ ರಾತ್ರಿ ಎಲ್ಲರೂ ಸಾಮೂಹಿಕವಾಗಿ ಬೇಟೆಯಾಡುತ್ತಿದ್ದರು. ರಾತ್ರಿ ದೊರೆತ ಜಿಂಕೆಗಳನ್ನು, ಕಾಡು ಹಂದಿಗಳನ್ನು, ಮೊಲಗಳನ್ನು ಮರುದಿನ ಊರಿನೊಳಗೆ ತಂದು ಬೇಟೆಗೆ ಹೋದವರೆಲ್ಲರೂ ಸಮಾನವಾಗಿ ಅವುಗಳ ಮಾಂಸವನ್ನು ಹಂಚಿಕೊಳ್ಳುತ್ತಿದ್ದರು. ಆ ರೀತಿಯಾಗಿ ಬಂದಿರುವ ಮಾಂಸವನ್ನು ಆ ದಿನ ಅಡಿಗೆ ಮಾಡಿಕೊಂಡು ತಿನ್ನುತ್ತಿದ್ದರು. ಆದ್ದರಿಂದ ಯುಗಾದಿ ಕಳೆದ ಮರುದಿನವನ್ನು **ಬೇಟೆದಿನವೆಂದು** ಮೊದಲು ಎನ್ನುತ್ತಿದ್ದರು. ಪ್ರಾಣಿಗಳು ಮನುಷ್ಯರ ಬರುವಿಕೆಯನ್ನು ನೋಡಿ ಓಡಿಹೋಗುತ್ತಿದ್ದರೆ ಅವುಗಳ ಹಿಂದೆ ಓಡಿಹೋಗಿ ಬೇಟೆಯಾಡುವುದರಿಂದ ಆ ದಿನವನ್ನು 'ಪಾರುವೇಟ'(ಪಾರುಬೇಟೆ) ದಿನವೆಂದು ಸಹ ಕರೆಯುತ್ತಿದ್ದರು. **'ಪಾರುವೇಟ'** ಎಂಬ ಪದ ಕೊನೆಗೆ **'ಪಾರೇಟ'** ಎಂಬ ಪದವಾಗಿ ಮಾರ್ಪಟ್ಟಿದೆ. ಕಾಲಕ್ರಮೇಣ **'ಪಾರೇಟ'** ಪದವೂ ಸಹ ಹೋಗಿ **'ಪಾರನ'** ಎಂಬ ಪದವಾಗಿ ಬದಲಾಗಿದೆ.

**'ಪಾರನ'**ಎಂಬ ಪದ ರಾಯಸೀಮ ಪ್ರದೇಶದಲ್ಲಿ ಹೆಚ್ಚಾಗಿ ಇದೆ. ಬೆಟ್ಟಗಳನ್ನು ಕನುಮಲು ಎಂದು ಸಹ ಕರೆಯುತ್ತಿದ್ದರು. ನಲಮಲೆ ಕನುಮಲು ಎಂದರೆ ನಲಮಲೆ ಬೆಟ್ಟಗಳೆಂದು ಅರ್ಥ. ಮಲೆ ಎಂದರೆ ಕಾಡು ಎಂದೂ, ಕನುಮ ಎಂದರೆ ಬೆಟ್ಟ ಎಂದು ತಿಳಿಯುತ್ತಿದೆ. ಕೆಲವರು ಯುಗಾದಿ ರಾತ್ರಿಗೆ ಹತ್ತಿರದಲ್ಲಿರುವ ಬೆಟ್ಟಕ್ಕೆ ಹೋಗಿ ಬೇಟೆಯಾಡಿ ಪ್ರಾಣಿಗಳನ್ನು ತಂದುಕೊಳ್ಳುತ್ತಿದ್ದರು. ಆದ್ದರಿಂದ ಆ ದಿನವನ್ನು ಕೆಲವು ಪ್ರಾಂತ್ಯದವರು **'ಕನುಮ ಹಬ್ಬ'** ಎಂದು ಸಹ ಕರೆಯುತ್ತಿರುತ್ತಾರೆ. ಈ ವಿಧವಾಗಿ ಯುಗಾದಿ ಮರುದಿನ ಪ್ರಾರಂಭವಾದ ಕನುಮ ಹಬ್ಬ ಅಂದರೆ ಪಾರನ ಹಬ್ಬ ಈದಿನ ಎಲ್ಲಾ ಹಬ್ಬಗಳ ಹಿಂದಿನ ದಿನ

ತಪ್ಪದೆ ನಡೆಯುತ್ತಿರುವುದಾಗಿದೆ. ಪೂರ್ವದಲ್ಲಿ ಕಾಡಿಗೆ ಹೋಗಿ ಪ್ರಾಣಿಗಳನ್ನು ಬೇಟೆಯಾಡಿ ಹಬ್ಬ ಮಾಡಿಕೊಂಡರೆ, ಇಂದು ಊರಿನಲ್ಲಿಯೇ ಸಾಕಿ ಬೆಳೆಸಿದ ಪ್ರಾಣಿಗಳನ್ನು ಕೊಂದು ತಿನ್ನುತಿದ್ದಾರೆ. ಆ ದಿನಗಳ ಮಾದಿರಿಯಂತೆ ಕಾಡಿಗೆ ಹೋಗಬೇಕಾದ ಕೆಲಸವಿಲ್ಲ, ಓಡಿಹೋಗಿ ಬೇಟೆಯಾಡಬೇಕಾದ ಕೆಲಸವಿಲ್ಲ. ಹಣವಿದ್ದರೆ ಯಾವ ಪ್ರಾಣಿಯ ಮಾಂಸವಾದರು ಸಿಗುತ್ತದೆ. ಈ ವಿಧಾನ ದ್ವಾಪರಯುಗದಲ್ಲಿಯೇ ಒಂದು ರೀತಿಯಾಗಿ ಜಾರಿಯಲ್ಲಿದ್ದರೆ, ಕಲಿಯುಗ ಪ್ರಾರಂಭದಲ್ಲಿಯೆ ಮತ್ತೊಂದು ರೀತಿಯಲ್ಲಿ ಪ್ರಾರಂಭವಾಗಿದೆ.

ಕೃತಯುಗದಲ್ಲಿ ಇಲ್ಲದ ದೇವತೆಗಳು ತ್ರೇತಾಯುಗದಿಂದ ಮನುಷ್ಯರಲ್ಲಿ ಸ್ಥಾನ ಏರ್ಪಡಿಸಿಕೊಂಡಿವೆ. ದ್ವಾಪರಯುಗ ಕೊನೆಗೆ ಹಬ್ಬಗಳಲ್ಲಿರುವ ಆಧ್ಯಾತ್ಮಿಕತೆ ಹೋಗಿ ಹಬ್ಬಗಳೆಂದರೆ ದೇವತೆಗಳ ಆರಾಧನೆಗಳೆನ್ನುವಂತೆ ಮನೆಮಾತಾಗಿವೆ. ಒಂದೊಂದು ಹಬ್ಬದಲ್ಲಿ ಒಂದೊಂದು ದೇವತಾ ಪೂಜೆ ಜಾರಿಯಾಗುತ್ತಾ ಬರುತ್ತಿದೆ. ದಶರಾ ಎಂದರೆ ದುರ್ಗಾದೇವಿದೆಂದು, ಶಿವರಾತ್ರಿ ಎಂದರೆ ಶಿವಪಾರ್ವತಿಯರದೆಂದು ಹೀಗೆ ಹಬ್ಬಗಳೆಲ್ಲಾ ತಯಾರಾಗಿಹೋಗಿವೆ. ಕಲಿಯುಗ ಪ್ರಾರಂಭದಲ್ಲಿ ಗ್ರಾಮದೇವತೆಗಳಾದ ದೊಡ್ಡಮ್ಮ, ಸುಂಕಲಮ್ಮ, ಎಲ್ಲಮ್ಮ, ಪೋಲೆರಮ್ಮ ಎಂಬ ಮೊದಲಾದ ಹೆಣ್ಣು ದೇವತೆಗಳು ಪ್ರಾಂತ್ಯವ್ಯಾಪ್ತವಾಗಿ ಅನೇಕ ಹೆಸರುಗಳಿಂದ ತಯಾರಾಗಿದ್ದಾರೆ. ಈ ಸಮಯದಲ್ಲಿಯೇ ಮೊದಲಿನಿಂದ ಇರುವ ಹಬ್ಬಗಳೆಲ್ಲ ಮಹಾದೇವತೆಗಳ ಹಬ್ಬಗಳೆಂದು, ನಂತರ ತಯಾರಾದ ಹಬ್ಬಗಳೆಲ್ಲ ಕ್ಷುದ್ರದೇವತೆಗಳ ಹಬ್ಬಗಳೆಂದು ಹೇಳಲ್ಪಟ್ಟಿವೆ. ದ್ವಾಪರಯುಗ ಅಂತ್ಯದಲ್ಲಿಯೆ ಯುಗಾದಿ, ಶಿವರಾತ್ರಿ, ದಶರಾ, ಸಂಕ್ರಾಂತಿ ಮೊದಲಾದ ಹಬ್ಬಗಳಿಗೆ ಪಾರನ (ಕನುಮ) ಹಬ್ಬ ಜೊತೆಯಾಗಿ ಇರುತ್ತಿತ್ತು. ಕಲಿಯುಗ ಪ್ರಾರಂಭ ಕಾಲದಲ್ಲಿಯೇ ಮಾಂಸಪ್ರಿಯರು ಹೆಚ್ಚಾಗಿ ಒಂದೇ ಪ್ರಕಾರ ಮಾಂಸಭಕ್ಷಣಗೆ ಪ್ರಾಧಾನ್ಯತೆಕೊಡುವ ಹಬ್ಬಗಳನ್ನು ತಯಾರು ಮಾಡಬೇಕೆಂದುಕೊಂಡಿದ್ದಾರೆ. ಆ ಉದ್ದೇಶದಿಂದಲೇ ಪ್ರಾಣಿ ಬಲಿಗಳಿರುವ ಹಬ್ಬಗಳನ್ನು ಪ್ರತ್ಯೇಕವಾಗಿ ಸೃಷ್ಠಿಸಿಕೊಂಡಿದ್ದಾರೆ. ಅವುಗಳೆ ಈದಿನ ಕ್ಷುದ್ರದೇವತೆ ಇಲ್ಲವೆ ಗ್ರಾಮದೇವತೆ

ಹಬ್ಬಗಳು. ಕೃತಯುಗದಲ್ಲಿ ಆಧ್ಯಾತ್ಮಿಕತೆ ಇರುವ ಹಬ್ಬಗಳಿರುವಾಗ ತ್ರೇತಾಯುಗ ದಿಂದ ಬದಲಾಗುತ್ತಾ ದಿನ ದಿನಕ್ಕೂ ಹಬ್ಬಗಳಲ್ಲಿ ದೇವತಾ ಪಾತ್ರಗಳು ಹೆಚ್ಚಾಗಿ, ದ್ವಾಪರಯುಗ ಅಂತ್ಯಕ್ಕೆ ಪ್ರತಿ ಹಬ್ಬಕ್ಕೂ ಪಾರನ ಹಬ್ಬ ತಗಲಿಕೊಂಡು ಹಬ್ಬಗಳ ಅರ್ಥವೇ ಕೆಟ್ಟುಹೋಗಿ, ಕಲಿಯುಗ ಪ್ರಾರಂಭದಲ್ಲಿಯೆ ಗ್ರಾಮದೇವತೆಗಳ ಹಬ್ಬಗಳು ಸಹ ಪ್ರಾರಂಭವಾಗಿ ಆ ಹಬ್ಬಗಳಲ್ಲಿ ಮಾಂಸಭಕ್ಷಣವೆ ಪ್ರಧಾನ ಪಾತ್ರವಾಗಿದೆ. ಕಲಿಯುಗ ಪ್ರಾರಂಭದಲ್ಲಿಯೆ ಗ್ರಾಮದೇವತೆಗಳ ಪ್ರಾಬಲ್ಯ ಬೆಳೆದು ಬಂದು ಅಂತಹ ಹಬ್ಬಗಳಲ್ಲಿ ಮಾಂಸ ಭಕ್ಷಣವೇ ಅಲ್ಲದೆ ಮತ್ತು ಪಾನೀಯಗಳು ಬಳಸುವುದು ಸಹ ನಡೆಯುತ್ತಿದೆ. ಪೂರ್ವ ಎಷ್ಟೋ ಆತ್ಮಜ್ಞಾನದಿಂದ ಪ್ರಾರಂಭವಾದ ಹಬ್ಬಗಳು ಇಂದು ಎಷ್ಟೋ ಅಜ್ಞಾನದಲ್ಲಿ ಸಿಲುಕಿಕೊಂಡು ಹೋಗಿವೆ. ಎಲ್ಲರೂ ಏನು ಮಾಡುತ್ತಿದ್ದರೆ ಅದೇ ಮಾಡಬೇಕೆಂದು ಮಾಡುತ್ತಿರುವ ಮನುಷ್ಯರು ಎಲ್ಲರೂ ಮಾಡುತ್ತಿರುವ ಕೆಲಸ ಏನೆಂದಾಗಲಿ, ಅದರ ಸವಿವರವೇನೆಂದಾಗಲಿ ಸ್ವಲ್ಪವೂ ಯೋಚಿಸುತ್ತಿಲ್ಲ. ಅನೇಕ ಕ್ಷೇತ್ರಗಳಲ್ಲಿ ಮೇಧಾವಿ ಗಳಾದವರು ಸಹ ಒಂದೇ ಒಂದು ಭಕ್ತಿ ವಿಷಯದಲ್ಲಿ ಕುರುಡರಂತೆ ಮೂಢನಂಬಿಕೆಗಳ ಮೇಲೆ ಪ್ರಯಾಣಿಸುತ್ತಿದ್ದಾರೆ. ಇವರನ್ನು ನೋಡಿದ ಕೆಲವರಿಗೆ ಏನು ಅರ್ಥವಾಗದೆ ದೇವರೆ ಇಲ್ಲವೆಂಬ ನಿರ್ಣಯಕ್ಕೆ ಬಂದಿದ್ದಾರೆ.

ಮೊದಲು ಆಧ್ಯಾತ್ಮಿಕತೆಯಿಂದ ಪ್ರಾರಂಭವಾದ ಹಬ್ಬಗಳು ಕಾಲಕ್ರಮೇಣ ಬದಲಾಗುತ್ತಾ ಭಕ್ತಿಯೊಳಗೆ ಬಂದು, ಭಕ್ತಿಯಿಂದ ಮೂಢ ಭಕ್ತಿಯೊಳಗೆ ಬಿದ್ದು ಕೊನೆಗೆ ನಾಸ್ತಿಕತ್ವದವರೆಗೂ ಬಂದಿದ್ದೇವೆ. ಮನೆಯಲ್ಲಿ ನನ್ನ ಪತ್ನಿ ಮಾಡಿಕೊಳ್ಳುತ್ತಾಳೆ ಆದರೆ ಹಬ್ಬಗಳೆಂದರೆ ನನಗೆ ನಂಬಿಕೆಯಿಲ್ಲ ಎನ್ನುವವರು ಕೆಲವರು ತಯಾರಾಗಿದ್ದಾರೆ. ಮಹಾಹಬ್ಬಗಳಿಂದ ಕ್ಷುದ್ರದೇವತಾ ಹಬ್ಬಗಳವರೆಗೂ ಸಾಗಿ ಬಂದ ಜನ ಅವುಗಳನ್ನು ಬಿಡಬೇಕೆಂದರೂ ಗ್ರಾಮದೇವತೆಗಳು ಅವರನ್ನು ಬಿಡುವುದಿಲ್ಲ. ಮಾಫಿಯಾ ಗುಂಪಿನೊಳಗೆ ಹೋದವರು ಸಾಯುವವರೆಗೂ ಅದರಲ್ಲಿಯೇ ಕೊನಗಾಣಬೇಕಾಗಿದ್ದೆ, ಹೊರಗೆ ಬರಬೇಕೆಂದರೂ ಗುಂಪು ನಾಯಕರು ಹೊರಗೆ ಬಿಡುವುದಿಲ್ಲ. ಬಲವಂತವಾಗಿ ಹೊರಬೀಳ

ಬೇಕೆಂದುಕೊಂಡರೆ ಮಾಫಿಯಾ ಗುಂಪಿನವರಿಂದಲೇ ಪ್ರಮಾದವಿರುತ್ತದೆ. ಹಾಗೆಯೇ ಗ್ರಾಮ ದೇವತೆಗಳ ಭಕ್ತಿಯಲ್ಲಿ ಬಿದ್ದವರು ಆ ಗ್ರಾಮದೇವತೆಗಳಿಂದ ಹೊರಬೀಳಲಾರರು. ಹೊರಬೀಳಬೇಕೆಂದುಕೊಂಡರು ಆ ದೇವತೆಗಳು ಹೊರಬಿಡುವುದಿಲ್ಲ. ಒಂದುವೇಳೆ ಆ ಭಕ್ತಿಯನ್ನು ಪೂರ್ತಿ ಬಿಟ್ಟವನಿಗೆ ಆ ದೇವತೆಗಳಿಂದಲೇ ಪ್ರಮಾದವಿರುತ್ತದೆ. ಈ ವಿಷಯದಲ್ಲಿ ಗ್ರಾಮದೇವತೆಗಳಿಂದ ದುಃಖಪಡುವವರನ್ನು ಬಹಳಜನರನ್ನು ನೋಡಿದ್ದೇವೆ. ಪೂರ್ತಿ ಪೋಲೀಸ್ ರಕ್ಷಣೆ ಇರುವವನಿಗೆ ಮಾಫಿಯಾ ಗುಂಪು ಏನು ಹಾನಿಮಾಡಲಾರದಂತೆ, ಪೂರ್ತಿ ಆತ್ಮಜ್ಞಾನ ತಿಳಿದವನನ್ನು ಯಾವ ಕ್ಷುದ್ರದೇವತೆಗಳು ಯಾವ ಹಾನಿ ಮಾಡಲಾರವು. ಆದ್ದರಿಂದ ಯಾರಾದರಾಗಲಿ, ಯಾವ ದೇವತೆಗಳ ಬಲೆಯಲ್ಲಿ ಸಿಲುಕಿಕೊಂಡಿದ್ದರೂ, ಈಗಲಿಂದ ಆತ್ಮಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿ ಜ್ಞಾನ ತಿಳಿದುಕೊಂಡ ನಂತರ ಕ್ಷುದ್ರದೇವತೆಗಳ ಭಕ್ತಿಯನ್ನು ಬಿಡಬಹುದು. ಹಾಗಲ್ಲದೆ ಯಾರೂ ಅವರಿಂದ ಹೊರಬೀಳಲಾರರು. ಜ್ಞಾನ ಇಲ್ಲದವರನ್ನು ಗ್ರಾಮದೇವತೆಗಳೆ ಅಲ್ಲದೆ ಚಿಕ್ಕ ಚಿಕ್ಕ ಗ್ರಹಗಳು (ದೆವ್ವಗಳು) ಸಹ ಬಾಧಿಸುತ್ತವೆ. ಆತ್ಮಜ್ಞಾನ ಇರುವವರನ್ನು ಚಿಕ್ಕ ದೆವ್ವಗಳಾಗಲಿ, ಗ್ರಾಮದೇವತೆಗಳಾಗಲಿ, ಮಹಾದೇವತೆಗಳಾಗಲಿ ಎಲ್ಲರೂ ಭಯಗೊಂಡು ಗೌರವಿಸುತ್ತಾರೆ. ಜ್ಞಾನ ಇರುವವರ ಹತ್ತಿರ ವಿನಯವಾಗಿ ಪ್ರವರ್ತಿಸುತ್ತಾರೆ. ಆದ್ದರಿಂದ ಪೂರ್ವವೇ ನಮ್ಮ ಹಿರಿಯರು ಆತ್ಮಜ್ಞಾನವನ್ನು ಪ್ರಜೆಗಳಿಗೆ ತಿಳಿಸಬೇಕೆಂದು ಹಬ್ಬಗಳನ್ನು ನಮ್ಮ ನಡುವೆ ಇಟ್ಟಿದ್ದಾರೆ. ಈಗಿನ ಅಜ್ಞಾನ ವಿಧಾನವನ್ನು ಬಿಟ್ಟು, ಅಜ್ಞಾನ ವಾತಾವರಣದಲ್ಲಿ ಮಾಡುತ್ತಿರುವ ಹಬ್ಬಗಳನ್ನು ನಮ್ಮ ಭಾವನೆಯಲ್ಲಿ ಬದಲಾವಣೆ ತಂದುಕೊಂಡು, ಜ್ಞಾನವನ್ನು ಉಂಟುಮಾಡುವ ವಾತಾವರಣದಲ್ಲಿ ಮಾಡಿಕೊಳ್ಳೋಣ. ನಮ್ಮ ಜೀವನದಲ್ಲಿ ಜ್ಞಾನವನ್ನು ತಿಳಿದುಕೊಂಡು ಜ್ಞಾನ ಪಂಡಿತರಾಗಿ ತಯಾರಾಗೋಣ.

ಪ್ರಪಂಚದಲ್ಲಿ ಇಲ್ಲಿಯವರೆಗೂ ಯಾರಿಂದಲೂ ಗುರುತಿಸಲ್ಪಡದಿರುವುದು, ಯಾರೂ ಕಂಡುಕೊಳ್ಳದಿರುವುದು, ಯಾರಿಗೂ ತಿಳಿಯದಿರುವುದು ಪರಮಾತ್ಮ. ಪರಮಾತ್ಮನನ್ನೆ ದೇವರು ಎಂದು ಸಹ ಕರೆಯಬಹುದು. ದೇವರು ಎಂದರೂ ಯಾರಿಗೂ ತಿಳಿಯದವನೆಂದೇ ಅರ್ಥ. ವಿವರವಾಗಿ ಹೇಳಿಕೊಂಡರೆ ದೇವರೆಂದರೆ, ಕಂಡುಹಿಡಿಯಲ್ಪಡುವವನು ಇಲ್ಲವೆ ಹುಡುಕಲ್ಪಡುವವನು ಎಂದು ಅರ್ಥ. ಹುಡುಕಲ್ಪಡುವವನು ಎಂದರೆ ಕಾಣಿಸದವನೆಂದು ಅರ್ಥ. ದೇವರೆನ್ನುವವನು ಯಾರೊ, ಹೇಗಿರುತ್ತಾನೊ, ಆತನ ಹೆಸರೇನೊ, ಆತನ ಸ್ಥಾನವೇನೊ, ಆತನ ಕೆಲಸವೇನೊ ಯಾರಿಗೂ ತಿಳಿಯದು. ಅಂತಹವರೊಂದಿಗೆ ನಮಗೇನು ಕೆಲಸ ಎನ್ನುವುದಕ್ಕೆ ಸಾಧ್ಯವಿಲ್ಲ. ಭೂಮಿಮೇಲೆ ಜೀವಿಸುತ್ತಿರುವ ಪ್ರತಿ ಜೀವರಾಶಿಗೂ, ಪ್ರತಿ ಮನುಷ್ಯನಿಗೂ ಶಕ್ತಿ ಅಗತ್ಯ. ಶರೀರದಲ್ಲಿ ಶ್ವಾಸ ಆಡುವುದಕ್ಕೂ ಶಕ್ತಿ ಬೇಕು. ಆಹಾರ ಜೀರ್ಣವಾಗುವುದಕ್ಕೂ ಶಕ್ತಿ ಬೇಕು. ಶರೀರದಲ್ಲಿನ ಪ್ರತಿ ಕದಲಿಕೆಗೂ, ಪ್ರತಿ ಭಾಗಕ್ಕೂ ಶಕ್ತಿ ಅಗತ್ಯ. ಶರೀರದಲ್ಲಿ ಎಲ್ಲಿ ಶಕ್ತಿ ಇಲ್ಲದಿದ್ದರೆ ಅಲ್ಲಿ ವ್ಯಾಧಿ ಏರ್ಪಡುತ್ತದೆ. ವ್ಯಾಧಿ ಏರ್ಪಟ್ಟಾಗ ಶಕ್ತಿ ಇರುವುದಿಲ್ಲ ವೆಂದು, ಬಲಹೀನವಾಗಿರುವುದೆಂಬ ವಿಷಯ ಎಲ್ಲರಿಗೂ ತಿಳಿದಿದೆ.

ಶರೀರದಲ್ಲಿ ಎಲ್ಲಿಯಾದರೂ ವ್ಯಾಧಿ(ರೋಗ) ಇಲ್ಲದಹಾಗೆ ಹೋಗಬೇಕೆಂದರೆ, ಶರೀರಕ್ಕೆ ಶಕ್ತಿ ಅಗತ್ಯ. ಯಾವಾಗ ಶಕ್ತಿ ಇದೆಯೊ, ಆಗ ವ್ಯಾಧಿ ಇರುವುದಿಲ್ಲ. ಮನುಷ್ಯ ಶರೀರಕ್ಕೆ ಶಕ್ತಿ ಎಲ್ಲಿಂದ ಲಭಿಸುತ್ತಿದೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಪ್ರಪಂಚದಲ್ಲಿರುವ ಯಾವ ಜೀವರಾಶಿಗಾಗಲಿ, ಶಕ್ತಿ ಎಂಬುದು ಪ್ರಕೃತಿಯಿಂದ ಲಭಿಸುತ್ತಿದೆಯೆಂದು ಹೇಳಬಹುದು. ಪ್ರಕೃತಿ ಶಕ್ತಿ ನಿಲಯವೆ? ಎಂದು ಕೇಳಿದರೆ ಶಕ್ತಿ ಪ್ರಕೃತಿಯೊಂದರ ಸ್ವಂತದ್ದಲ್ಲವೆಂದು ತಿಳಿಯುತ್ತದೆ. ಪ್ರತಿ ಜೀವರಾಶಿಯ ಶರೀರವು ಪ್ರಕೃತಿಯಿಂದ ತಯಾರು ಮಾಡಲ್ಪಟ್ಟಿದೆ. ಆದರೂ ಶರೀರಕ್ಕೆ ಕೊಡುವ ಶಕ್ತಿ ಪ್ರಕೃತಿ ಹತ್ತಿರ ಇಲ್ಲ. ಇಲ್ಲಿ ಪ್ರಕೃತಿಯಿಂದ ಎಲ್ಲರಿಗೂ ಶಕ್ತಿ ಲಭಿಸುತ್ತಿದೆಂದು ಮೇಲಿನ ವಾಕ್ಯಗಳಲ್ಲಿ ಹೇಳಿ, ಈಗ ನಿಮಿಷ ಸಹ ಕಳೆಯದೆಯೇ ಪ್ರಕೃತಿ ಹತ್ತಿರ ಶಕ್ತಿಯೇ ಇಲ್ಲವೆಂದು

ಅಸತ್ಯ ಹೇಳಿದರೆ ಹೇಗೆ ಎಂದು ಯಾರಾದರೂ ನಮ್ಮನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಶಕ್ತಿ ಪ್ರಕೃತಿಯಿಂದ ಲಭಿಸುವುದು ವಾಸ್ತವ ವೆಯಾಗಲಿ, ಶಕ್ತಿ ಪ್ರಕೃತಿದು ಅಲ್ಲ. ನಿಜಕ್ಕೆ ಶಕ್ತಿ ಪರಮಾತ್ಮ (ದೇವರ)ದು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ ಪರಮಾತ್ಮನಿಗೆ ವಿಲಾಸ ಇಲ್ಲ. ಆತನು ಯಾರೊ? ಹೇಗೊ? ಯಾರಿಗೂ ತಿಳಿಯದು. ಆದ್ದರಿಂದ ಶಕ್ತಿ ತನ್ನದೆ ಆದರೂ ದೇವರು ತಾನು ಎಲ್ಲಿಯೂ ತಿಳಿಯದಂತೆ ತನ್ನ ಶಕ್ತಿಯನ್ನು ಪ್ರಕೃತಿ ಮೂಲಕ ನೀಡುತ್ತಿದ್ದಾನೆ. ಪ್ರಕೃತಿ ತನಗೆ ಲಭಿಸಿದ ಶಕ್ತಿಯನ್ನು ಮನುಷ್ಯನಿಗೆ ಕೊಡುತ್ತಿದೆ. ದೇವರು ಇಲ್ಲ ಎಂದುಕೊಳ್ಳುವವರೆಲ್ಲರೂ ಶಕ್ತಿ ಎಲ್ಲವೂ ಪ್ರಕೃತಿದೆ ಎಂದು ಹೇಳುತ್ತಿದ್ದರು. ದೇವರು ಯಾವ ಮಾನವನಿಗೂ ತಿಳಿಯದಂತಿರುವುದಕ್ಕೆ, ತನ್ನ ಮತ್ತು ಮಾನವನ ನಡುವೆ ಪ್ರಕೃತಿಯನ್ನು ಇಟ್ಟುಕೊಂಡಿದ್ದಾನೆ. ತಾನು ಏನು ಮಾಡದಂತೆ ಪ್ರಕೃತಿಯಿಂದ ಎಲ್ಲಾ ಮಾಡಿಸುತ್ತಿದ್ದಾನೆ. ಪ್ರಕೃತಿಯ ಹಿಂದಿರುವವನು ದೇವರೆ, ಆದರೂ ದೇವರು ಎಲ್ಲಿಯೂ ಯಾರಿಗೂ ತಿಳಿಯುವುದಿಲ್ಲ, ತಿಳಿಯುವುದೆಲ್ಲಾ ಪ್ರಕೃತಿಯೇ.

ಪ್ರಪಂಚವೆಲ್ಲಾ ಒಂದು ಶಕ್ತಿಯಿಂದಲೇ ನಡೆಯುತ್ತಿದೆ. ಆದರೂ ಆ ಶಕ್ತಿ ದೇವರದೆಂದು ಯಾರಿಗೂ ತಿಳಿಯದು. ಸ್ತ್ರೀಲಿಂಗವಾದ ದೇವತೆಯದ್ದೇ (ಪ್ರಕೃತಿದೆ) ಎಂದು ಎಲ್ಲರೂ ತಿಳಿದುಕೊಳ್ಳುವಹಾಗೆ ನಮ್ಮಲ್ಲಿನ ಮಾಯೆ ಭ್ರಮಿಸುವಂತೆ ಮಾಡಿದೆ. ಶಕ್ತಿ ಇರುವವನು ದೇವರು, ತಾನು ಹೊಂದಿದ ಶಕ್ತಿಯನ್ನು ಕೊಡುವುದು ದೇವತೆ (ಪ್ರಕೃತಿ). ದೇವರು ಎಂಬ ಪದದಿಂದ ದೇವತೆ ಎಂಬ ಪದ ಹುಟ್ಟಿದೆ. ಹಾಗೆಯೇ ಪರಮಾತ್ಮ ಪ್ರಕೃತಿಯಂತೆ ಇರುವ ಮತ್ತೊಂದು ಜೋಡಿಯನ್ನು ನೋಡೋಣ. ದೀಪ ಎನ್ನುವುದು ಬೆಳಕನ್ನು ಕೊಡುವುದೆಂದು ಎಲ್ಲರಿಗೂ ತಿಳಿದಿದೆ. ಬೆಳಕನ್ನು ಕೊಡುವುದು ಏನಾದರೂ ತಾನು ಪ್ರಕಾಶಿಸುತ್ತಾ, ತನ್ನ ಪ್ರಕಾಶದ ಮೂಲಕ ಇತರರಿಗೆ ಬೆಳಕನ್ನುಕೊಡುತ್ತಿದೆ. ಎಲ್ಲಿ ಬೆಳಕಿದ್ದರೂ ಅಲ್ಲಿ ದೀಪ ಇದೆಯೆಂದು ಹೇಳಬಹುದು. ಬೆಳಗುವುದು ದೀಪವಾದಾಗ ಚಿಕ್ಕ ಕಾಂತಿಯನ್ನು ಸಹ ದೀಪದ ಕೆಳಗೆ ಜಮಾಯಿಸಿ ಹೇಳಬೇಕು.

ಇಲ್ಲಿ ಕೆಲವರಿಗೆ ಅನುಮಾನ ಬಂದು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಚಿಕ್ಕ ಕೆಂಡದ ಕಿಡಿ ಸಹ ಸ್ವಲ್ಪಮಟ್ಟಿನ ಬೆಳಕನ್ನು ಕೊಡುತ್ತಿದೆ ಅಲ್ಲವೆ! ಅಂತಹದರಲ್ಲಿ ದೀಪವೆ ಬೆಳಕನ್ನು ಕೊಡುತ್ತದೆ ಎನ್ನುವುದನ್ನು ಅಲ್ಲಿಟ್ಟು, ಕೆಂಡ ಸಹ ಬೆಳಕನ್ನು ಕೊಡುತ್ತದೆಂದು ಹೇಳಬಹುದಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೀಪವಾಗಲಿ, ಕೆಂಡವಾಗಲಿ ಬೆಳಕನ್ನು ಕೊಡುವುದು ನಿಜವೆ! ಇಲ್ಲಿ ಒಂದು ಸೂತ್ರವನ್ನು ಅನುಸರಿಸಿ ಹೇಳಿಕೊಂಡರೆ ಬೆಳಕನ್ನು ಕೊಡುವುದು ಯಾವುದಾದರೂ ದೀಪ ಎಂದಿದ್ದೇವೆ. ಬೆಳಕು ದೀಪದಿಂದಲೇ ಎಂದು ಎಲ್ಲರೂ ಅಂದುಕೊಳ್ಳುವುದು ಸಹಜವೆ. ಪ್ರಕೃತಿಯಿಂದಲೇ ಶಕ್ತಿ ಲಭಿಸುತ್ತಿದೆಂದು ಎಲ್ಲರೂ ಅಂದುಕೊಂಡರೂ ಶಕ್ತಿ ದೇವರಿಂದ ಲಭಿಸುತ್ತಿದೆ. ಹಾಗೆಯೇ ದೀಪದಿಂದ ಬೆಳಕು ಬಂದರೆ ಅದು ವಾಸ್ತವವಾಗಿ ದೀಪದ್ದು ಅಲ್ಲ. ದೀಪಕ್ಕೆ ಹಿಂದೆ ಯಾರಿಗೂ ತಿಳಿಯದಂತಿರುವ ಅಗ್ನಿದು. ಅಗ್ನಿ ಬೇರೆ, ಬೆಳಗುವ ದೀಪ ಬೇರೆ. ಉರಿಯುವುದನ್ನು ಉರಿ ಇಲ್ಲವೆ ದೀಪವೆನ್ನುವಂತೆ ದೀಪಕ್ಕೆ ಕಾರಣವಾದುದನ್ನು ಅಗ್ನಿ ಎನ್ನುತ್ತಿದ್ದೇವೆ. ಕೆಂಡದಕಿಡಿಯನ್ನು ಅಥವಾ ಕೆಂಡದ ಕಣವನ್ನು ಅಗ್ನಿ ಎನ್ನಬಹುದಲ್ಲವೆ! ಅಂದರೆ, ಸೂತ್ರದ ಪ್ರಕಾರ ಅದು ಬೆಳಕನ್ನು ಕೊಡುತ್ತಿದೆ. ಆದ್ದರಿಂದ ಅದನ್ನು ಅಗ್ನಿ ಎನ್ನಬಾರದು ಬೆಳಗುವ ದೀಪ ಎನ್ನಬೇಕು. ದೇವರು ಎಲ್ಲಿಯಾದರೂ ಸರಿ ಎಲ್ಲಾ ಕಡೆ ವ್ಯಾಪಿಸಿದ್ದಾನೆ, ಆದರೆ ಶಕ್ತಿ ಮಾತ್ರ ಪ್ರಕೃತಿ ಮೂಲಕವೇ ಲಭಿಸುತ್ತದೆ. ಹಾಗೆಯೇ ಅಗ್ನಿ ಎಲ್ಲಿಯಾದರೂ ಇದೆ, ಆದರೆ ಬೆಳಕು ಮಾತ್ರ ದೀಪ ಇಲ್ಲವೆ ಉರಿಯುವ ಕೆಂಡದ ಮೂಲಕವೇ ಬರುತ್ತದೆ. ಕಾಂತಿ ಕಿರಣ ಅಗ್ನಿದೆ ಆದರೂ, ಅದು ದೀಪದ ಮೂಲಕವೇ ಬರುತ್ತಿದೆ. ಶಕ್ತಿ ದೇವರದೆ ಎಂದು ತಿಳಿದರೂ, ದೇವರು ಯಾರಿಗೂ ತಿಳಿಯದಂತೆ ಪ್ರಕೃತಿಯನ್ನು ಹೇಗೆ ತನ್ನ ಮುಂದೆ ಇಟ್ಟುಕೊಂಡಿ ದ್ದಾನೊ, ಹಾಗೆಯೇ ಬೆಳಕು ಅಗ್ನಿದೆ ಎಂದು ಎಲ್ಲರಿಗೂ ತಿಳಿದರೂ ಅಗ್ನಿ ಕಾಣಿಸದೆ ಅದರ ಬೆಳಕನ್ನು ಮುಂದಿಟ್ಟುಕೊಂಡಿದೆ. ದೇವರಿಗೆ ಅಡ್ಡವಾಗಿ ಪ್ರಕೃತಿ ಇರುವಂತೆ, ಅಗ್ನಿಗೆ ಅಡ್ಡವಾಗಿ ಬೆಳಗುವುದು ಯಾವುದಾದರೂ ಇರಬಹುದು. ಅದನ್ನೆ ಚಿಕ್ಕದಾದರೆ ದೀಪವೆಂದು, ದೊಡ್ಡದಾದರೆ ಉರಿ ಎಂದು ಕರೆಯುತ್ತಿದ್ದೇವೆ.

ದೇವರು ಎಂಬ ಪದವನ್ನು ನಾವು ನಿತ್ಯವೂ ಬಳಸಿದರೂ, ದೇವರು ಹೇಗೆ ಯಾರಿಗೂ ತಿಳಿಯಲ್ಲಿಲ್ಲವೊ, ಹಾಗೆಯೇ ಅಗ್ನಿಯನ್ನು ನಾವು ನೋಡಿದ್ದೇವೆ ಎಂದುಕೊಂಡರೂ, ಅಗ್ನಿ ಎಂಬ ಪದವನ್ನು ನಾವು ಪ್ರತಿದಿನ ಉಚ್ಚರಿಸುತ್ತಿದ್ದರೂ, ನಿಜಕ್ಕೂ ಅಗ್ನಿ ಎಂತಹದ್ದೊ ಯಾರಿಗೂ ತಿಳಿಯದು. ದೇವರು ಇಲ್ಲಿಯವರೆಗೂ ಯಾರಿಗೂ ತಿಳಿಯದಂತೆ, ಅಗ್ನಿಯೂ ಸಹ ಇಲ್ಲಿಯವರೆಗೂ ಯಾರಿಗೂ ತಿಳಿಯದು.

ದೇವರು ಎಲ್ಲರನ್ನು ಸೃಷ್ಟಿಸುತ್ತಿದ್ದಾನೆ. ಕೊನೆಗೆ ಎಲ್ಲರನ್ನು ಹರಿಸುತ್ತಿದ್ದಾನೆ ಎಂದು ಯಾರು ಹೇಳಿದರೂ, ಆ ಮಾತು ನಿಜವೆ ಆದರೂ, ದೇವರು ಯಾರೊ ಯಾರಿಗೂ ತಿಳಿಯದು. ಎಲ್ಲರಿಗೂ ತಿಳಿಯುವಂತೆ ಎಲ್ಲರನ್ನು ಸೃಷ್ಟಿಸುತ್ತಿರುವುದು ಹಾಗೂ ಹರಿಸುತ್ತಿರುವುದು ಪ್ರಕೃತಿಯೆ. ಅದೇ ವಿಧವಾಗಿ ಅಗ್ನಿ ಎಲ್ಲವನ್ನು ದಹಿಸುತ್ತಿದೆಂದು ಮತ್ತು ಬೆಳಕನ್ನು ಸಹ ಕೊಡುತ್ತಿದೆಂದು ಯಾರು ಹೇಳಿದರೂ ಆ ಮಾತು ನಿಜವೆ ಆದರೂ, ಅಗ್ನಿ ಏನೊ ಯಾರಿಗೂ ತಿಳಿಯದು. ಕೆಲವನ್ನು ತಿಳಿದಂತೆ ನಾವು ಮಾತನಾಡಿದರೂ, ನಿಜಕ್ಕೆ ಅವುಗಳ ಪೂರ್ತಿ ವಿಷಯ ತಿಳಿಯದೆಂದೇ ಹೇಳಬಹುದು. ಇಲ್ಲಿ ಕೆಲವರು ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾ, ನಾವು ತಪ್ಪಾಗಿ ತಿಳಿದಿದ್ದೇವಾ ಅಥವಾ ನಮ್ಮನ್ನು ನೀವು ತಪ್ಪುದಾರಿ ಇಡಿಸುತ್ತಿದ್ದೀರಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ನೀವು ಹಾಗೆ ಅನ್ನುವುದರಲ್ಲಿ ತಪ್ಪಿಲ್ಲ. ಏಕೆಂದರೆ ಯಾರಿಗಾದರೂ ತಮ್ಮಮೇಲೆ ತಮಗಾಗಲಿ, ಇಲ್ಲವೆ ನಮ್ಮಮೇಲಾಗಲಿ ಅನುಮಾನ ಬರಬಹುದು. ನಿಜಕ್ಕೂ ದೇವರ ಬಗ್ಗೆ ಎಷ್ಟು ಸಮಾಚಾರಗಳು ನಾನು ಹೇಳಿದರೂ ನಿಜವಾಗಲೂ ನನಗೆ ದೇವರು ತಿಳಿಯದು. ಹಾಗೆಯೇ ಒಂದು ಶಾಸ್ತ್ರವನ್ನು ಅದರಲ್ಲಿ ಒಂದು ಸೂತ್ರವನ್ನು ಅನುಸರಿಸಿ ಮಾತನಾಡದೆಹೋದರೆ, ಈ ಮಾತು ಮೂಢನಂಬಿಕೆಯಿಂದ ಮಾತನಾಡಿದಂತಾಗುತ್ತದೆ. ಹಾಗಲ್ಲದೆ ಬೆಳಗುವುದು ದೀಪ ಎನ್ನುವ ಸೂತ್ರವನ್ನು ಆಧಾರ ಮಾಡಿಕೊಂಡು ಹೇಳಿದರೆ, ನಾನು ಸಹ ಇಲ್ಲಿಯವರೆಗೂ ದೀಪವನ್ನೆ ನೋಡಿದ್ದೇನಾಗಲಿ ನಿಜವಾಗಲು ಅಗ್ನಿಯನ್ನು ನೋಡಲಿಲ್ಲ. ಒಂದೊಂದುಸಲ

ನಾನು ಸಹ ಅಗ್ನಿಯನ್ನು ನೋಡಿದ್ದೇನೆಂದು, ಉರಿಯದಂತೆ ಸ್ವಲ್ಪಸುಟ್ಟು ಕೆಂಪಗೆ ಕಾಣಿಸುವ (ಕೊಳ್ಳಿ) ಯನ್ನು ಅಗ್ನಿ ಎಂದುಕೊಂಡಿದ್ದೆನು. ಈಗದು ಮೂಢನಂಬಿಕೆಯೆಂದು, ನಿಜವಾಗಲು ನಾನು ಅಗ್ನಿಯನ್ನು ನೋಡಲಿಲ್ಲವೆಂದು ತಿಳಿದುಹೋಗಿದೆ. ಹೀಗೆ ಎಷ್ಟೋ ನಮಗೆ ತಿಳಿಯದ ವಿಷಯಗಳನ್ನು ತಿಳಿದಿದ್ದೇವೆಂದು ನಾವು ಅಂದುಕೊಳ್ಳುತ್ತಿರುವಂತೆ ಈಗ ಸ್ವಲ್ಪ ಅರ್ಥವಾಗಿದೆ.

ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಪ್ರಕೃತಿ ಬೇರೆ, ದೇವರು ಬೇರೆ. ಕಾಣಿಸದವನು ದೇವರು, ಕಾಣಿಸುವುದು ಪ್ರಕೃತಿ ಎಂದು ಬಹಳಸಲ ನೀವೇ ಹೇಳಿದ್ದೀರಾ ಅಲ್ಲವೆ! ಈಗ ಪ್ರಕೃತಿಯಲ್ಲಿನ ಭಾಗವಾದ ಅಗ್ನಿಯನ್ನು ಸಹ ಕಾಣಿಸುವುದಿಲ್ಲ ಎನ್ನುತ್ತಿದ್ದೀರೇನು? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಪರಮಾತ್ಮ (ದೇವರು) ಕಾಣಿಸುವುದಿಲ್ಲ. ಹಾಗೆಯೇ ಪ್ರಕೃತಿಯಲ್ಲಿನ ಆಕಾಶ, ಗಾಳಿ, ಅಗ್ನಿ ಎಂಬ ಮೂರು ಭಾಗಗಳು ಸಹ ಕಾಣಿಸುವುದಿಲ್ಲ. ಆಕಾಶವನ್ನು ಗಾಳಿಯನ್ನು ಯಾರೂ ನೋಡಲಿಲ್ಲ. ಹಾಗೆಯೇ ಅಗ್ನಿಯನ್ನು ಸಹ ಯಾರೂ ನೋಡಲಿಲ್ಲ. ಆದರೂ ಬಹಳಜನ ತಪ್ಪಾಗಿ ಅಗ್ನಿಯನ್ನು ನೋಡಿದ್ದೇವೆಂದುಕೊಳ್ಳುತ್ತಿದ್ದಾರೆ. ನಿಜವಾಗಲು ಆಕಾಶ, ಗಾಳಿ, ಅಗ್ನಿ ಮೂರು ಕಾಣಿಸುವವು ಅಲ್ಲ. ನೀರು, ಭೂಮಿ ಎರಡು ಮಾತ್ರವೆ ಕಾಣಿಸುವವಾಗಿವೆ. ಈ ಮಾತನ್ನು ಆಗಲೇ ಏಕೆ ಹೇಳಲಿಲ್ಲ ಎಂದು ಕೇಳಿದರೆ, ಈಗ ಹೇಳಬೇಕಾಗಿದೆ, ಆದ್ದರಿಂದ ಆಗ ಹೇಳಲಿಲ್ಲವೆಂದು ತಿಳಿಸುತ್ತಿದ್ದೇವೆ. ಗಿಡಕ್ಕೆ ಹುಟ್ಟುವ ಎಲೆಯನ್ನು ಹುಟ್ಟಿದ ತಕ್ಷಣ ತಿನ್ನಬಹುದು. ಆದರೆ ಅದೇ ಗಿಡಕ್ಕೆ ಹುಟ್ಟುವ ಕಾಯಿಯನ್ನು ಹುಟ್ಟಿದ ತಕ್ಷಣ ತಿನ್ನಲಾರೆವು. ಹಾಗೆಯೇ ಆಧ್ಯಾತ್ಮಿಕತೆಯಲ್ಲಿ ಕೆಲವು ವಿಷಯಗಳನ್ನು ಕೂಡಲೇ ಹೇಳಿದರೂ ಅರ್ಥವಾಗುತ್ತವೆ. ಕೆಲವು ವಿಷಯಗಳು ಸ್ವಲ್ಪ ಕಾಲದ ನಂತರ ಹೇಳಿದರೇನೆ ಅರ್ಥವಾಗುತ್ತವೆ. ಆಕಾಶ, ಗಾಳಿ ಕಾಣಿಸುವುದಿಲ್ಲ ಎಂದರೆ ಹೇಳಿದ ತಕ್ಷಣವೆ ಯಾರಾದರೂ ಕೇಳುತ್ತಾರೆ. ಅವುಗಳ ಜೊತೆಗೆ ಕೂಡಲೇ ಅಗ್ನಿ ಕಾಣಿಸುವುದಿಲ್ಲ ಎಂದರೆ ಆತನ ಮಾತನ್ನು ಅಸತ್ಯವಾಗಿ ಲೆಕ್ಕಿಸುತ್ತಾರೆ. ಆದ್ದರಿಂದ ನಾವು ಸಹ ಆಗ ಹೇಳದಂತೆ ಈಗ ಹೇಳುತ್ತಿದ್ದೇವೆ.

ನಮಗೂ ಗೊತ್ತು ಎಂದುಕೊಂಡರೂ ದೇವರನ್ನಾಗಲಿ, ಅಗ್ನಿಯನ್ನಾಗಲಿ ನಾವಾಗಲಿ ಯಾರಾಗಲಿ ನೋಡಲಿಲ್ಲವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಮೊದಲು ದೇವರ ವಿಷಯದಲ್ಲಿ ತಿಳಿಯದೆಂದು ಕೆಲವರು ಒಪ್ಪಿಕೊಂಡರೂ, ಅಗ್ನಿ ವಿಷಯದಲ್ಲಿ ತಿಳಿಯದೆಂದು ಒಪ್ಪಿಕೊಳ್ಳುವುದಕ್ಕೆ ಕೆಲವರು ಸ್ವಲ್ಪ ಹಿಂದೆಜ್ಜೆ ಹಾಕಿದರೂ, ಸ್ವಲ್ಪ ವಿವರವಾಗಿ ಆಲೋಚಿಸಿದ ನಂತರ ಒಪ್ಪಿಕೊಳ್ಳುತ್ತಾರೆ. ದೇವರ ವಿಷಯ ಮೊದಲನೆಯದಾಗಿದ್ದು, ಅಗ್ನಿ ವಿಷಯ ಎರಡನೆಯದು. ಇಂಥದ್ದೆ ಮತ್ತೊಂದು ವಿಷಯ ಇದೆ. ಮೂರನೆ ವಿಷಯದಲ್ಲಿಯೂ ಸಹ ಜನರೆಲ್ಲರೂ ಗೊಂದಲಕ್ಕೀಡಾಗಿದ್ದಾರೆಂದು ಹೇಳಬಹುದು. ಮೊದಲನೆಯದಾದ ದೇವರ ವಿಷಯವನ್ನು ನಾವು ನೋಡಲಿಲ್ಲವೆಂದು ಸುಲಭವಾಗಿ ಒಪ್ಪಿಸಬಹುದು. ಎರಡನೆಯದಾದ ಅಗ್ನಿ ವಿಷಯದಲ್ಲಿ ನಾವು ಗೊಂದಲದಲ್ಲಿದ್ದೇವೆಂದು ಒಪ್ಪಿಸುವುದಕ್ಕೆ ಸ್ವಲ್ಪ ಕಷ್ಟವಾಗುತ್ತದೆ. ಈಗ ಮೂರನೆ ವಿಷಯದಲ್ಲಿ ಒಪ್ಪಿಸುವುದಕ್ಕೆ ಬಹಳಬಹಳಬಹಳ ಕಷ್ಟವಾಗಿರುತ್ತದೆಂದು ಹೇಳಬಹುದು. ಆ ಮೂರನೆ ವಿಷಯ ಏನೊ, ಈಗ ನೋಡೋಣ.

ಸುಖ, ಆನಂದ ಎರಡೂ ಸಂತೋಷಕ್ಕೆ ಸಂಬಂಧಿಸಿದ ಸಮಾನ ಪದಗಳೆ, ಆದರೂ ಸುಖ ಬೇರೆ ಆನಂದ ಬೇರೆಯೆಂದು ಹೇಳಬಹುದು. ಇಂದ್ರಿಯಗಳ ಮೂಲಕ ಬರುವುದು ಸುಖ. ಮನೋಭಾವದ ಮೂಲಕ ಬರುವುದು ಆನಂದ. ನಾಲಿಗೆ ಮೂಲಕ ಒಳ್ಳೆಯ ಆಹಾರವನ್ನು ತಿನ್ನುತ್ತಾ ಎಷ್ಟು ಸುಖವನ್ನು ಅನುಭವಿಸಿದರೂ, ಮೂಗಿನ ಮೂಲಕ ಎಷ್ಟೋ ಒಳ್ಳೆಯ ಸುವಾಸನೆಯನ್ನು ತೆಗೆದುಕೊಳ್ಳುತ್ತಾ ಸುಖವನ್ನು ಅಸ್ವಾದಿಸಿದರೂ, ಕಣ್ಣಿನಮೂಲಕ ಎಷ್ಟೋ ಒಳ್ಳೆಯ ದೃಶ್ಯವನ್ನು ನೋಡಿದಾಗ ಜೀವಾತ್ಮ ಎಷ್ಟು ಸುಖವನ್ನು ಅನುಭವಿಸಿದರೂ ಅವನ ಕಣ್ಣಿನಲ್ಲಿ ನೀರು ಬರುವುದಿಲ್ಲ. ಆದರೆ ಮನೊಭಾವದಲ್ಲಿ ಅನುಭವಕ್ಕೆ ಬರುವ ಆನಂದವನ್ನು ಹೊಂದಿದಾಗ ಯಾರಿಗಾದರೂ ಕಣ್ಣಿನಲ್ಲಿ ನೀರು ಬರುತ್ತವೆ. ಮನೊ ಆನಂದ ಬೇರೆ, ಇಂದ್ರಿಯ ಸುಖ ಬೇರೆ ಎಂದು ಇದನ್ನನುಸರಿಸಿ ಸುಲಭವಾಗಿ ತಿಳಿಯುತ್ತಿದೆ. ಮನುಷ್ಯ ಐದು ಇಂದ್ರಿಯಗಳ

ಮೂಲಕ ಎಷ್ಟು ಸುಖ ಅನುಭವಿಸಿದರೂ ಕಣ್ಣಿನಲ್ಲಿ ಆನಂದ ಬಾಷ್ಪಗಳು ಬರುವುದಿಲ್ಲ. ಹಾಗೆಯೇ ಮನುಷ್ಯ ತನ್ನ ಇಂದ್ರಿಯಗಳ ಮೂಲಕ ಒಳ್ಳೆಯ ಜ್ಞಾನವನ್ನು ಕೇಳಿದಾಗ, ಇಲ್ಲವೆ ಓದಿದಾಗ ಮನೋಭಾವದಲ್ಲಿ ಆನಂದ ಉಂಟಾಗುವುದರಿಂದ ಕಣ್ಣಿನಲ್ಲಿ ಆನಂದ ಬಾಷ್ಪಗಳು ಬರುತ್ತವೆ. ಚಲನಚಿತ್ರ (ಸಿನಿಮಾ) ವನ್ನು ನೋಡಿದಾಗ ಕೆಲವು ದುಃಖ ಸಂಘಟಣೆಗಳಲ್ಲಿ, ನೋಡುವ ಮನುಷ್ಯನೂ ಸಹ ಅಲ್ಲಿನ ಭಾವದೊಂದಿಗೆ ಒಂದಾಗಿ ಹೋಗುವುದರಿಂದ, ನೋಡುವವನ ಕಣ್ಣಿಗೆ ನೀರು ಬರುವುದು ಶುರುವಾಗುತ್ತದೆ. ಇದರಿಂದ ಮನುಷ್ಯನ ಮನೋಭಾವಕ್ಕೆ ಒಳಗಾದಾಗ ಹೊಂದಿದ ಭಾವನೆ ಆನಂದವಾದರೂ, ದುಃಖವಾದರೂ ಮನುಷ್ಯನ ಕಣ್ಣಲ್ಲಿ ನೀರು ಬರುವುದು ನಡೆಯುತ್ತಿರುತ್ತದೆ. ಇಂದ್ರಿಯ ಕಷ್ಟಸುಖಗಳಲ್ಲಿ ಯಾರಿಗೂ ಕಣ್ಣಲ್ಲಿ ನೀರು ಬರುವುದಿಲ್ಲ. ಮನೋಭಾವಗಳಾದ ಆನಂದ ದುಃಖಗಳಲ್ಲಿಯೇ ಮನುಷ್ಯನ ಕಣ್ಣಲ್ಲಿ ನೀರು ಬರುತ್ತವೆ.

ಇಲ್ಲಿಯವರೆಗೂ ಹೇಳಿರುವವೆಲ್ಲ ಎಲ್ಲರಿಗೂ ತಿಳಿದಿರುವುದೆ. ಇಂದ್ರಿಯಗಳ ಕಷ್ಟ ಸುಖಗಳು, ಮನೋಭಾವ ಆನಂದ ದುಃಖಗಳು ಎಲ್ಲರ ಅನುಭವಗಳಲ್ಲಿ ಇರುತ್ತವೆ. ಆದರೆ ಇಂದ್ರಿಯ ಸುಖಗಳಿಗೂ, ಮನೋಭಾವ ಆನಂದಕ್ಕೂ ದೊಡ್ಡ ವ್ಯತ್ಯಾಸವೇನು ಇರುವುದಿಲ್ಲವೆಂದೇ ಹೇಳಬಹುದು. ಸುಖವೂ, ಆನಂದವೂ ಎರಡು ಅನುಭವಗಳೆ. ಆದರೆ ನೀರಾಲು, ಗಟ್ಟಿಹಾಲು ಎನ್ನುವಂತೆ, ಸುಖಕ್ಕೂ ಆನಂದಕ್ಕೂ ಸ್ವಲ್ಪ ವ್ಯತ್ಯಾಸ ಮಾತ್ರ ಇದೆ. ಸುಖದಲ್ಲಿ ಕಣ್ಣೀರು ಬರುವುದಿಲ್ಲ, ಆನಂದದಲ್ಲಿ ಕಣ್ಣೀರು ಬರುವುದು ಮಾತ್ರವೆ ವ್ಯತ್ಯಾಸವಿದೆ. ಆದರೆ ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾದ ವಿಷಯವೊಂದು ಇದೆ. ಪ್ರಪಂಚ ಭಾವಗಳಲ್ಲಿ ಹೊಂದುವ ಆನಂದಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗಿ ಹೊಂದುವಂತಹ ಆನಂದ ಸಹ ಇದೆ. ಅಂತಹ ಪ್ರತ್ಯೇಕವಾದ ಆನಂದ ಒಂದು ದೈವಜ್ಞಾನ ವಿಷಯಗಳಲ್ಲಿ ಮಾತ್ರ ಲಭಿಸುತ್ತದೆ. ಪ್ರಪಂಚ ಸಂಬಂಧವಾದ ಭಾವಾ ಅನಂದಗಳನ್ನು ಎಷ್ಟೋ ಹೊಂದಿದವನಾದರೂ, ಒಂದುಬಾರಿ ಆತ್ಮಾನಂದ

ಭಾವವನ್ನು ಹೊಂದಿದಾಗ, ಆ ಆನಂದ ಎಷ್ಟು ದೊಡ್ಡದೊ ಆಗ ತಿಳಿಯುತ್ತದೆ, ಆತ್ಮಾನಂದಕ್ಕೆ ಮಿತಿಗಳಿರುವುದಿಲ್ಲ. ಮನುಷ್ಯ ಆತ್ಮಾನಂದ ಭಾವವನ್ನು ಹೊಂದಿದಷ್ಟು ಸಮಯ ಆತನ ಕಣ್ಣಿನಲ್ಲಿ ಆನಂದ ಬಾಷ್ಪಗಳು ಬರುತ್ತಲೇ ಇರುತ್ತವೆ. ಅಂತಹ ಆನಂದವನ್ನು ಮನುಷ್ಯ ತನ್ನ ಜೀವನದಲ್ಲಿ ಯಾವಾಗ ನೋಡಿರುವುದಿಲ್ಲ. ಪ್ರಪಂಚವಿಷಯಗಳಲ್ಲಿ ಭಾವ ಆನಂದ ಏರ್ಪಟ್ಟರೂ, ಪ್ರಪಂಚ ಆನಂದಕ್ಕೂ ಆತ್ಮ ಆನಂದಕ್ಕೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ಪ್ರಪಂಚದಲ್ಲಿ ಯಾವಾಗ ಎಲ್ಲಿಯೂ ಹೊಂದದ ಆನಂದವನ್ನು ಹೊಂದಿದ್ದೇನೆಂದು ಮನುಷ್ಯ ತೃಪ್ತಿ ಹೊಂದುತ್ತಾನೆ. ಅಂತಹ ಆನಂದಕ್ಕೆ ಕೆಲವು ಕೋಟಿಗಳ ಹಣವನ್ನು ಖರ್ಚುಮಾಡಿದರೂ ಬರುವುದಿಲ್ಲವೆಂದು ಅದನ್ನು ಅನುಭವಿಸಿದವನಿಗೆ ತಿಳಿದುಹೋಗುತ್ತದೆ.

ಅಷ್ಟು ದೊಡ್ಡ ಆನಂದ ನಮಗೆ ಎಲ್ಲಿ ಲಭಿಸುತ್ತದೆಂದು ಯಾರಾದರೂ ಕೇಳಿದರೆ, ಅದು ಒಂದು ಆತ್ಮಜ್ಞಾನದಲ್ಲಿ ಮಾತ್ರ ಲಭಿಸುತ್ತದೆಂದು ಹೇಳಬಹುದು. ಈ ಮಾತಿಗೆ ಪ್ರತಿಯಾಗಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ನಾವು ಎಷ್ಟೋ ಆಧ್ಯಾತ್ಮಿಕ ಗ್ರಂಥಗಳನ್ನು ಓದಿದ್ದೇವೆ. ಎಷ್ಟೋ ಆಧ್ಯಾತ್ಮಿಕ ಉಪನ್ಯಾಸಗಳನ್ನು ಕೇಳಿದ್ದೇವೆ. ಎಷ್ಟೋ ತೀರ್ಥಯಾತ್ರೆಗಳು ಮಾಡಿದ್ದೇವೆ. ಬಾಬಾಗಳಿಗೂ, ಮಹರ್ಷಿಗಳಿಗೂ ಸೇವೆಮಾಡಿದ್ದೇವೆ. ಎಷ್ಟೋ ಅಷ್ಟು ಜ್ಞಾನ ನಮಗೂ ತಿಳಿದಿದೆ ಅಂದುಕೊಂಡಿದ್ದೇವೆ. ಆದರೂ ನೀವು ಹೇಳುವ ಆನಂದ ನಮಗೆ ಉಂಟಾಗಲಿಲ್ಲವೆ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾವು ಪ್ರತ್ಯೇಕಿಸಿ ಹೇಳುತ್ತಾ, ನೀರಿನಲ್ಲಿ ಮುಳುಗಿದವನಿಗೆ ಶರೀರವೆಲ್ಲಾ ತೇವ ಆಗುತ್ತದೆಂದು ಹೇಳಿದ್ದೇನೆ. ಆದರೆ ಕೆಲವರು ಎಣ್ಣೆಯಲ್ಲಿ ಮುಳುಗಿ ನಮಗೆ ನೀವು ಹೇಳಿದ ತೇವ ಆಗಲಿಲ್ಲವೇ ಎಂದು ಕೇಳಿದರೆ, ಅದಕ್ಕೆ ಉತ್ತರವಾಗಿ ನೀವು ಮುಳುಗಿರುವುದು ಎಣ್ಣೆ, ನಾನು ಹೇಳಿರುವುದು ನೀರು ಎಂದು ಹೇಳುತ್ತೇನೆ. ಆದರೆ ಬಹಳಜನ ದೊಡ್ಡ ತೊಟ್ಟಿಯಲ್ಲಿ ಸುರಿದಿರುವ ಎಣ್ಣೆಯನ್ನು ನೋಡಿ, ಅದರೊಳಗೆ ಕಲ್ಲುಹಾಕಿ, ಕಲ್ಲಿನ ರಭಸಕ್ಕೆ ಅದು

ಕದಲಿರುವುದನ್ನನುಸರಿಸಿ ಎಣ್ಣೆಯನ್ನು ನೀರೇಯೆಂದು ಭ್ರಮಿಸಿ. ಅದರಲ್ಲಿ ಮುಳುಗಿದರೆ ಶರೀರಕ್ಕೆ ತೇವವಾದರೂ ಅದು ನೀರಿನ ತೇವ ಅಲ್ಲ. ಎಣ್ಣೆಜಿಡ್ಡು ಅಂಟಿಕೊಳ್ಳುತ್ತಿದೆ. ಆದ್ದರಿಂದ ನೀವು ಓದುವುವೆಲ್ಲಾ ಆಧ್ಯಾತ್ಮಿಕ ಗ್ರಂಥಗಳೊ ಅಲ್ಲವೊ ನೋಡಿಕೊಳ್ಳಿ. ಹಾಗೆಯೇ ನೀವು ಕೇಳುವವೆಲ್ಲ ಜ್ಞಾನವಿಷಯಗಳೊ ಅಲ್ಲವೊ ಪರಿಶೀಲಿಸಿಕೊಳ್ಳಿ. ನೀವು ಸೇವಿಸಿದವರು ಜ್ಞಾನಿಗಳೊ ಅಲ್ಲವೊ, ಜ್ಞಾನವೇಷದಲ್ಲಿರುವವರೊ! ಜಾಗ್ರತೆಯಿಂದ ನೋಡಿಕೊಳ್ಳಿ. ನಿಮಗೆ ಆತ್ಮಾನಂದ ಉಂಟಾಗದಿದ್ದರೆ ನೀವು ಓದಿರುವುದು, ನೀವು ಕೇಳಿರುವುದು ಆತ್ಮಜ್ಞಾನ ಅಲ್ಲವೆಂದು ತಿಳಿದುಕೊಳ್ಳಿ. ನಿಜವಾದ ದೈವಜ್ಞಾನಕ್ಕೋಸ್ಕರ ಅನ್ವೇಷಿಸಿರಿ. ನೀವು ವಿಜ್ಞತೆಯಿಂದ ಶ್ರಮಿಸಿದರೆ ತಪ್ಪದೆ ಆಧ್ಯಾತ್ಮಿಕ ಜ್ಞಾನ ಲಭಿಸುತ್ತದೆ. ಇದರಿಂದ ಆತ್ಮಾನಂದವನ್ನು ಪಡೆಯಬಹುದು. ಅದೇ ದೊಡ್ಡ ಆನಂದ, ಆದ್ದರಿಂದ ಅದನ್ನು ಬ್ರಹ್ಮಾನಂದ ಎಂದು ಸಹ ಹೇಳಬಹುದು.

ಈಗ ಮೂಲ ವಿಷಯಕ್ಕೆ ಬರೋಣ. ಮನುಷ್ಯನಿಗೆ ಅತಿ ದೊಡ್ಡದಾದ ಆನಂದ ಲಭಿಸಬೇಕೆಂದರೆ ಆತ್ಮಜ್ಞಾನ ತಿಳಿಯಬೇಕು. ಆತ್ಮಜ್ಞಾನ ತಿಳಿಯಬೇಕೆಂದರೆ ಗುರುವು ಹೇಳಿದಾಗಲೇ ತಿಳಿಯುತ್ತದೆ. ದೈವಜ್ಞಾನ (ಆತ್ಮಜ್ಞಾನ) ಗುರುವು ಮೂಲಕವೇ ತಿಳಿಯುತ್ತದೆ. ಪ್ರಪಂಚದಲ್ಲಿ ಗುರುವನ್ನು ಸಂಪಾದಿಸಿಕೊಳ್ಳುವುದು ದೊಡ್ಡ ಕಷ್ಟವಾದ ಕೆಲಸವೇನು ಅಲ್ಲ. ಎಷ್ಟೋ ಜನ ಗುರುಗಳು ವಿವಿಧ ಹೆಸರುಗಳಿಂದ ಇದ್ದಾರೆ. ಅವರಲ್ಲಿ ಕಾಷಾಯ ವಸ್ತ್ರಗಳು ಧರಿಸಿದವರಿಂದ ಹಿಡಿದು ದಿಗಂಬರರವರೆಗೂ, ಜುಟ್ಟು ಗಡ್ಡ ಬೆಳಸಿಕೊಂಡವರಿಂದ ಹಿಡಿದು ಗುಂಡು ಮಾಡಿಸಿಕೊಂಡ ಸನ್ಯಾಸಿಗಳವರೆಗೂ, ಆದಿ ಶಂಕರಾಚಾರ್ಯರಿಂದ ಹಿಡಿದು ಆಚಲ ಸಿದ್ಧಾಂತಗಳವರೆಗೂ, ಕಿವಿಯಲ್ಲಿ ಮಂತ್ರವನ್ನು ಹೇಳುವ ಸ್ವಾಮಿಗಳಿಂದ ಹಿಡಿದು ಮೂಗಿನ ಮೇಲೆ ಧ್ಯಾಸವನ್ನು ತೋರಿಸುವ ಮಹರ್ಷಿಗಳವರೆಗೂ ಗುರುಗಳಾಗಿ ಎಷ್ಟೋ ಜನ ಇದ್ದಾರೆ. ಇಷ್ಟುಜನ ಗುರುಗಳಲ್ಲಿ ಒಬ್ಬ ಗುರುವನ್ನು ಆಶ್ರಯಿಸಿ ಆತ್ಮಜ್ಞಾನವನ್ನು ತಿಳಿಯಲ್ಪಟ್ಟರೆ ಆನಂದ ಲಭಿಸುತ್ತದೆಂದು ಬಹಳಜನ ಅಂದುಕೊಳ್ಳಬಹುದು. ಆದರೆ ನಾವು

ಹೇಳುವುದೇನೆಂದರೆ! ಗುರುಗಳೆಂದು ಹೆಸರು ಇಟ್ಟುಕೊಂಡವರು ಎಷ್ಟು ಜನರಿದ್ದರೂ, ಅವರಲ್ಲಿ ಗುರು ಮೂಲಕವೇ ಜ್ಞಾನವೂ, ಜ್ಞಾನದ ಮೂಲಕ ಆನಂದ ಲಭಿಸುತ್ತದೆಂದು ಹೇಳಿದ್ದೇವೆ. ಇಷ್ಟುಜನರಲ್ಲಿ ಚೆನ್ನಾಗಿ ಬೋಧಿಸುವವರನ್ನು, ದೊಡ್ಡ ಹೆಸರಿರುವವರನ್ನು ಆರಿಸಿಕೊಂಡು ಆತನನ್ನು ಗುರುವಾಗಿ ನೀವು ಸ್ವೀಕರಿಸಿದರೂ ಫರವಾಗಿಲ್ಲ. ನೀರೆಂದು ನಂಬಿ ಎಣ್ಣೆಯಲ್ಲಿ ಬಿದ್ದು ಶರೀರವೆಲ್ಲಾ ಜಿಡ್ಡನ್ನು ಬಳಿದುಕೊಳ್ಳದೆ, ಮೊದಲೆ ನೀವು ಆಶ್ರಯಿಸಿದ ವ್ಯಕ್ತಿ ಗುರುವೊ ಅಲ್ಲವೊ, ಸ್ವಲ್ಪ ನೋಡಿಕೊಳ್ಳಬೇಕಾದ ಅವಶ್ಯಕತೆ ಇದೆ. ಸೂತ್ರದ ಪ್ರಕಾರ ಗುರುವಿನಿಂದಲೇ ಜ್ಞಾನ ಲಭಿಸುತ್ತದೆ. ಆದ್ದರಿಂದ ಗುರು ವಿಷಯದಲ್ಲಿ ಸ್ವಲ್ಪ ಜಾಗ್ರತೆ ತೆಗೆದುಕೊಳ್ಳಬೇಕಾಗಿದೆ. ಗುರು ವಿಷಯದಲ್ಲಿ ಜಾಗ್ರತೆ ತೆಗೆದುಕೊಳ್ಳುವುದು ಏನಿದೆ, ಯಾವ ಗುರುವು ಹೇಳಿದರೂ ದೈವಜ್ಞಾನವೆ ಅಲ್ಲವೆ! ಎಂದು ಕೆಲವರಂದುಕೊಂಡರೆ, ಉರಿಯುವುದು ಏನಾದರೂ ಅಗ್ನಿಯೇ ಎನ್ನುವಂತಿರುತ್ತದೆ. ಅಗ್ನಿ ವಿಷಯದಲ್ಲಿ ಗೊಂದಲದಿಂದ ಅಗ್ನಿಯನ್ನು ನಾವು ನೋಡಿದ್ದೇವೆ ಎಂದುಕೊಂಡಂತೆ, ಭೂಮಿಮೇಲೆ ಬಹಳಜನ ನಾವು ಗುರುವನ್ನು ನೋಡಿದ್ದೇವೆ, ನಮಗೂ ಒಬ್ಬ ಗುರುವಿದ್ದಾನೆ ಎಂದುಕೊಳ್ಳುತ್ತಾರೆ. ನಿಜಕ್ಕೂ ದೇವರು, ಅಗ್ನಿ ಹೇಗೆ ತಿಳಿಯದಂತಿದೆಯೊ ಹಾಗೇ ಗುರುವೂ ಸಹ ಯಾರಿಗೂ ತಿಳಿಯನು. ಗುರುವು ತಿಳಿಯದಿರುವುದೇನು? ನಮ್ಮ ಊರಿನಲ್ಲಿ ನಾಲ್ಕುಜನ ಗುರುಗಳಿದ್ದಾರೆ. ಪಕ್ಕದ ಊರಿನಲ್ಲಿ ಹತ್ತುಜನ ಇದ್ದಾರೆಂದು ಕೆಲವರು ಹೇಳಬಹುದು.

ಎಷ್ಟುಜನ ಜ್ಞಾನವನ್ನು ಬೋಧಿಸಿದರೂ ಅವರೆಲ್ಲರೂ ಬೋಧಕರೆ ಆಗುತ್ತಾರಾಗಲಿ, ಗುರುಗಳಾಗುವುದಿಲ್ಲ. ಇಂದು ಭೂಮಿಮೇಲೆ ಯಾರೂ ಏನು ಬೋಧಿಸಿದರೂ ಆತನನ್ನು ಉಳಿದವರು ಗುರುವಾಗಿ ಭಾವಿಸುತ್ತಿದ್ದಾರೆ. ಆದರೆ ಆತನು ಹೇಳಿದ ಮಾತುಗಳು ಮೊದಲೇ ಹೇಳಲ್ಪಟ್ಟಿವೆಯೆಂದು, ಇರುವುದನ್ನು ಹೇಳುವವನು ಬೊಧಕನೆ ಆಗುತ್ತಾನಾಗಲಿ, ಗುರು ಆಗುವುದಿಲ್ಲವೆಂದು ತಿಳಿಯಬೇಕು. ಗುರು ಆದವನು ಪ್ರತ್ಯೇಕವಾದವನು. ಇವರು ಗುರು ಎಂದು ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಜ್ಞಾನ ಯಾರಿಂದ

ಹೇಳಲ್ಪಟ್ಟರೂ ಮೊದಲು ಜ್ಞಾನ ಗುರುವಿನಿಂದ ಬಂದಿರುತ್ತದೆ. ಶಕ್ತಿ ದೇವರದೆ ಆದರೂ ಪ್ರಕೃತಿಯಿಂದ ಬಂದಂತೆ, ಬೆಳಕು ಅಗ್ನಿದೆ ಆದರೂ ದೀಪದಿಂದ ಬರುವಂತೆ, ಜ್ಞಾನ ಗುರುವುದೆ ಆದರೂ ಬೋಧಕನ ಮೂಲಕ ಹೇಳಲ್ಪಡುತ್ತಿದೆ. ಆದ್ದರಿಂದ ಬೋಧಿಸುವವನು ಗುರು ಅಲ್ಲವೆಂದು ಹೇಳುತ್ತಿದ್ದೇನೆ. ಆ ಲೆಕ್ಕದ ಪ್ರಕಾರ ಗುರುವನ್ನು ಮನುಷ್ಯ ಎಂದಿಗೂ ತಿಳಿಯಲಾರನು. ಯಾವಾಗಲೋ ಒಂದುಬಾರಿ ಪ್ರಪಂಚದಲ್ಲಿ ಗುರುವು ಮನುಷ್ಯನಾಗಿ ಬಂದು ಬೋಧಿಸುತ್ತಾನೆ. ಗುರುವಾಗಿ ಬಂದಿರುವ ಮನುಷ್ಯ ಯಾರು ಎಂದು ತಿಳಿಯುವುದಕ್ಕೆ ಸಾಧ್ಯವಿಲ್ಲ. ಬೋಧಿಸುವವನು ಬೋಧಕನು ಎಂಬ ಸೂತ್ರದ ಪ್ರಕಾರ, ಗುರುವು ಬೋಧಿಸುವಾಗ ಸಹ ಆತನನ್ನು ಬೋಧಕನೆಂದೇ ಲೆಕ್ಕಹಾಕಬೇಕಾಗಿ ಬರುತ್ತದೆ. ಆದ್ದರಿಂದ ಭೂಮಿಮೇಲೆ ಗುರುವನ್ನು ಯಾರೂ ಗುರುತಿಸಲಾರರೆಂದು ಹೇಳಬಹುದು. ದೇವರ ಜ್ಞಾನ ಗುರುವಿಗಲ್ಲದೆ ಯಾವ ಮಾನವನಿಗೂ ತಿಳಿಯದೆಂಬ ಸೂತ್ರವಿದೆ. ಮತ್ತೊಂದು ಸೂತ್ರದ ಪ್ರಕಾರ ದೇವರ ಜ್ಞಾನ ದೇವರಿಗೆ ಗೊತ್ತು ಎಂಬುದು ಕೂಡ ಇದೆ. ಗುರು ಹಾಗೂ ದೇವರು ಒಬ್ಬರೇ ಎಂದು ತಿಳಿದಾಗಲೇ ಈ ಎರಡು ಸೂತ್ರಗಳು ಸರಿಹೋಗುತ್ತವೆ. ದೇವರು ತಿಳಿಯುವವನಲ್ಲ. ಆದ್ದರಿಂದ ಗುರುವು ಸಹ ತಿಳಿಯುವವನಲ್ಲ. ಗುರುವನ್ನು ತಿಳಿದರೆ ದೇವರನ್ನೆ ತಿಳಿದಂತಾಗುತ್ತದೆ. ಆದ್ದರಿಂದ ಗುರುವು ಯಾರೊ ತಿಳಿಯದು, ಹಾಗೆ ದೇವರು ಯಾರೊ ತಿಳಿಯದು. ಈ ವಿಷಯ **"ಗುರು"** ಎನ್ನುವ ಗ್ರಂಥದಲ್ಲಿ ಮೊದಲೆ ಬರೆದಿದ್ದೇವೆ. ಭೂಮಿಮೇಲೆ ಯಾರಾದರೂ ನಾವು ಗುರುಗಳೆಂದು ಹೇಳಿಕೊಂಡರೂ, ಅವರು ನಿಜಕ್ಕೂ ಬೋದಕರೆ ಆಗುತ್ತಾರೆ. ಇಲ್ಲಿಯವರೆಗೂ ಶಕ್ತಿ, ಬೆಳಕು, ಆನಂದ ಹೇಗೆ ಲಭಿಸುತ್ತವೊ ತಿಳಿದುಕೊಂಡಿದ್ದೇವೆ.

1. ಪರಮಾತ್ಮ ⟶ ಪ್ರಕೃತಿ ⟶ ಶಕ್ತಿ X ವ್ಯಾಧಿ.
2. ಅಗ್ನಿ ⟶ ದೀಪ ⟶ ಬೆಳಕು X ಕತ್ತಲು.
3. ಗುರು ⟶ ಜ್ಞಾನ ⟶ ಆನಂದ X ದುಃಖ.

ಪೂರ್ವದಲ್ಲಿ ಮೂರು ಯುಗಗಳಲ್ಲಿ ತಿಳಿದ ಈ ಮೂರು ವಿಧಾನಗಳು ಕಲಿಯುಗ ಪ್ರಾರಂಭದಲ್ಲಿಯೇ ತಿಳಿಯದಂತೆಹೋಗಿವೆ. ಹಾಗೆ ತಿಳಿಯದಂತೆ ಹೋಗಿರುವುದರಿಂದ, ಆತ್ಮಜ್ಞಾನಕ್ಕೆ ಹಾನಿ ಏರ್ಪಡುತ್ತದೆಂಬ ಉದ್ದೇಶದಿಂದ, ಕೆಲವರು ತಿಳಿದ ಹಿರಿಯರು ದೇವರು, ಗುರು ಎಂದರೆ ಯಾರೆಂದು ಎಲ್ಲರಿಗೂ ತಿಳಿಯುವಹಾಗೆ, ಪ್ರಕೃತಿ ಮತ್ತು ದೈವಜ್ಞಾನ ಏನೊ ತಿಳಿಯುವಹಾಗೆ, ಶಕ್ತಿ ಆನಂದ ಎಲ್ಲಿಂದ ಲಭಿಸುತ್ತಿವೆಯೊ ಅರ್ಥವಾಗುವಂತೆ ಅವುಗಳಿಗೆ ಉದಾಹರಣೆಯಾಗಿ, ಗುರುತಿಗಾಗಿ ದೀಪವನ್ನು ತೋರಿಸುವುದು ನಡೆದಿದೆ. ಈ ವಿಧಾನವೆಲ್ಲ ತಿಳಿಯುವುದಕ್ಕೆ ಪ್ರತ್ಯೇಕಿಸಿ ವರ್ಷದಲ್ಲಿ ಒಂದು ದಿನವನ್ನು ಆಯ್ಕೆ ಮಾಡಿಕೊಂಡು, ಆ ದಿನದಂದು ಮನೆಯೊಳಗೆ ಮತ್ತು ಮನೆ ಹೊರಗೆ ದೀಪವನ್ನು ಬೆಳಗಿಸಿ ಅದರ ವಿವರವೆಲ್ಲವೂ ಹೇಳುವುದು ನಡೆದಿದೆ. ಆ ದಿನ ಎಲ್ಲರೂ ಮನೆಯೊಳಗೆ ಒಂದು ದೀಪ, ಹೊರಗೆ ಒಂದು ದೀಪ ಬೆಳಗಿಸಿ ಅದರ ಅರ್ಥವನ್ನು ಹೇಳಿಸಿಕೊಳ್ಳುತ್ತಿದ್ದರು. ಮನುಷ್ಯನಲ್ಲಿನ ಅಜ್ಞಾನವನ್ನು ತೆಗೆದುಹಾಕಿ ಜ್ಞಾನವನ್ನು ತಿಳಿಸುವುದಕ್ಕೆ ಮಾಡುವ ಆಚಾರ ಕ್ರೀಯೆ ಆದ್ದರಿಂದ, ಆ ಕಾರ್ಯವನ್ನು ಒಂದು ಹಬ್ಬವಾಗಿ ಮಾಡುವುದು ನಡೆದಿದೆ. ಅಜ್ಞಾನ ಕತ್ತಲಿಗೆ ಗುರುತು, ಜ್ಞಾನ ಬೆಳಕಿಗೆ ಗುರುತು. ಆದ್ದರಿಂದ ಕತ್ತಲ ದಿನವಾದ ಅಮಾವಾಸ್ಯೆ ದಿನ ದೀಪವನ್ನು ಇಟ್ಟು ತೋರಿಸುವುದು ನಡೆಯುತ್ತಿದೆ. ಪ್ರತಿ ವರ್ಷ ಆಶ್ವೀಜಮಾಸದಲ್ಲಿ ಬರುವ ಅಮವಾಸ್ಯೆ ದಿನ ಈ ವಿಧಾನ ದೀಪಾವಳಿ ಹಬ್ಬವಾಗಿ ಮಾಡಿಕೊಳ್ಳುವುದು ನಡೆಯುತ್ತಿದೆ.

ಮನುಷ್ಯ ಶರೀರದೊಳಗೆ, ಶರೀರದ ಹೊರಗೆ ಜ್ಞಾನವನ್ನು ಹೊಂದಿರಬೇಕೆಂಬ ಉದ್ದೇಶದಿಂದ, ಶರೀರವನ್ನು ನಾವು ನಿವಾಸಿಸುವ ಗೃಹವಾಗಿ ಹೋಲಿಸಿ, ಮನೆಯೊಳಗೆ ದೀಪ, ಮನೆಹೊರಗೆ ದೀಪ ಇಡುವಂತೆ ಹಿರಿಯರು ಹೇಳಿದ್ದಾರೆ. ಜ್ಞಾನವೊಂದರ ಉದ್ದೇಶವನ್ನು ತಿಳಿಸುವ ಸಂಪ್ರದಾಯ ಹಬ್ಬವಾದ್ದರಿಂದ ಪೂರ್ವದಲ್ಲಿ ಮನೆಯೊಳಗೆ ಒಂದು ದೀಪ, ಮನೆ ಹೊರಗೆ ಒಂದು ದೀಪವನ್ನು ಇಡುತ್ತಿದ್ದರು. ಇಂದು ಪೂರ್ವದಲ್ಲಿ ಏರ್ಪಡಿಸಿದ ಅರ್ಥ

ಆಚಾರ ತಿಳಿಯದಂತೆಹೋಗಿ ಅಲಂಕಾರಕ್ಕೋಸ್ಕರ ಹೆಚ್ಚಿನ ದೀಪಗಳನ್ನು ಇಡುವುದು ಜನರು ಅಭ್ಯಾಸ ಮಾಡಿಕೊಂಡಿದ್ದಾರೆ. ದೀಪದ ಮೂಲಕ ಬೆಳಕು ಬರುತ್ತದೆಂದು, ದೀಪ ಬೆಳಗುವುದಕ್ಕೆ ಕಾರಣ ಅಗ್ನಿಯೆಂದು, ಅಗ್ನಿ ದೀಪಕ್ಕೆ ಕಾರಣವಾಗಿದ್ದು ಯಾರಿಗೂ ತಿಳಿಯದ್ದಾಗಿ ಇದೆಯೆಂದು, ಹಾಗೆಯೇ ಶಕ್ತಿಗೆ ಕಾರಣವಾದ ದೇವರಾಗಲಿ, ಜ್ಞಾನಕ್ಕೆ ಕಾರಣವಾದ ಗುರುವಾಗಲಿ ಯಾರಿಗೂ ತಿಳಿಯದಂತಿದ್ದಾರೆಂದು, ಈಕಡೆ ದೇವರನ್ನು, ಆಕಡೆ ಗುರುವನ್ನು ತಿಳಿಯುವುದಕ್ಕೋಸ್ಕರ ಈ ವಿಧಾನವಾದ ದೀಪಾವಳಿ ಮಾಡುತ್ತಿದ್ದೇವೆಂದು ಯಾರೂ ಇಂದು ತಿಳಿದುಕೊಳ್ಳುತ್ತಿಲ್ಲ. ದೀಪದಿಂದ ಬೆಳಕು ಬಂದು ಕತ್ತಲನ್ನು ಓಡಿಸಿದಹಾಗೆ, ಜ್ಞಾನದಿಂದ ಆನಂದ ಲಭ್ಯವಾಗಿ ದುಃಖ ದೂರವಾಗಿ ಹೋಗುತ್ತದೆಂದು ತಿಳಿಯುವಹಾಗೆ, ಒಳ್ಳೆಯ ಉದ್ದೇಶದಿಂದ ಪೂರ್ವದಲ್ಲಿ ದೀಪಾವಳಿ ಹಬ್ಬವನ್ನು ಏರ್ಪಡಿಸಿದ್ದಾರೆಂದು ಮರೆಯಬಾರದು. ಆದರೆ ಇಂದು ನಾಗಚವತಿ, ವಿನಾಯಕಚವತಿ ಬದಲಾದಂತೆ ದೀಪಾವಳಿ ಅಮಾವಾಸ್ಯೆಯೂ ಸಹ ಕೊನೆಗೆ ಪುರಾಣಕಥೆಯಾಗಿ ಬದಲಾಗಿ ನರಕಾಸುರನನ್ನು ಸಂಹರಿಸಿದ ದಿನವಾಗಿ ಹೇಳಲ್ಪಡುತ್ತಿದೆ. ಪೂರ್ವದಲ್ಲಿ ಪ್ರಶಾಂತವಾಗಿ ಜ್ಞಾನಭಾವದಿಂದ ಮಾಡಿಕೊಳ್ಳುವ ದೀಪಾವಳಿಯೂ ನರಕ ಚತುರ್ದಶಿಯಾಗಿ ಮಾರ್ಪಟ್ಟು, ಪಟಾಕಿ ಶಬ್ಧಗಳಿಂದ ಪ್ರಶಾಂತತೆಯಾಗಲಿ, ಜ್ಞಾನಭಾವವಾಗಲಿ ಇಲ್ಲದಹಾಗೆ ಹೋಗಿದೆ. ಈಗಲಿಂದಾದರೂ ಪಟಾಕಿಗಳ ಶಬ್ದವಿಲ್ಲದೆ ಪ್ರಶಾಂತವಾಗಿ, ಅರ್ಥವಿರುವ ಆಚಾರವಾಗಿ ದೀಪಾವಳಿ ಹಬ್ಬವನ್ನು ಮಾಡಿಕೊಳ್ಳೋಣ.

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

---

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,

ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ

ಬ್ರಹ್ಮ ಚಕ್ರ
ಕಾಲ ಚಕ್ರ
ಕರ್ಮ ಚಕ್ರ
ಗುಣ ಚಕ್ರ
ಬ್ರಹ್ಮ ನಾಡಿ
ಇಂದೂ ಜ್ಞಾನವೇದಿಕೆ

## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ನಮ್ಮ ಹಬ್ಬಗಳು

## (ಹೇಗೆ ಮಾಡಬೇಕೋ ತಿಳಿದಿದೆಯಾ?)




Author :

The Only Guru of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**


**www.thraithashakam.org**